ಹಿರಿಯ ವಿದ್ವಾಂಸರಾದ ಪ್ರೊ.ಜಿ.ವೆಂಕಟಸುಬ್ಬಯ್ಯ ಅವರು ಮತ್ತೊಮ್ಮೆ 'ಹಂಗಾಮ'ದ ಬಗ್ಗೆ ಮನದಾಳದ ಮೆಚ್ಚುಗೆ ವ್ಯಕ್ತಪಡಿಸಿ ಬರೆದಿದ್ದಾರೆ. ಮೊದಲ ದಿನಗಳಿಂದಲೇ ನಮ್ಮನ್ನು ಬೆಂಬಲಿಸಿದವರು ಅವರು. ನಮ್ಮ ಪ್ರಯತ್ನ ಅವರಿಗೆ ಒಪ್ಪಿಗೆಯಾಗಿದೆಯೆಂಬುದು ನಮಗೆ ಹಿಗ್ಗು ತಂದಿದೆ.

ನಮ್ಮ ಪ್ರಯತ್ನವನ್ನು ತುಂಬಾ ಮೆಚ್ಚಿಕೊಂಡವರಲ್ಲಿ ಮತ್ತೊಬ್ಬರಾದ ಉಡುಪಿಯ ಹಿರಿಯ ಪತ್ರಕರ್ತ ಪಿ.ಗಣಪತಿ ಭಟ್ ಅವರು ಪ್ರತಿಸಲವೂ ತಮ್ಮ ಬಹಳಷ್ಟು ಸ್ನೇಹಿತರಿಗೆ 'ಹಂಗಾಮ'ವನ್ನು ತಲುಪಿಸುವ ಶ್ರಮ ತೆಗೆದುಕೊಳ್ಳುತ್ತಿದ್ದಾರೆ. ಅವರ ನಿರ್ವ್ಯಾಜ ಪ್ರೀತಿಯಿಂದ ಏನೋ ಹಿರಿದನ್ನು ಗಳಿಸಿದ ಧನ್ಯತೆ ಕಂಡಿದ್ದೇವೆ.

ಕೊಪ್ಪದಲ್ಲಿರುವ ನ್ಯಾಯವಾದಿ ಸುಧೀರ್ ಕುಮಾರ್ ಮೂರೊಳ್ಳಿ ಅವರು ತಮ್ಮ ಗೆಳೆಯರ ಮಧ್ಯೆ ಹಂಚುವುದಕ್ಕಾಗಿ ಪ್ರತಿ ಸಲವೂ ಪತ್ರಿಕೆಯ ಒಂದಿಷ್ಟು ಪ್ರತಿಗಳನ್ನು ತರಿಸಿಕೊಳ್ಳುತ್ತಾರೆ. ಹಾಗೆ ಕನಿಷ್ಠ ಹತ್ತು ಸಲ ನಾವು ಕಳಿಸಿದ್ದಕ್ಕಾಗುವಷ್ಟು ಹಣವನ್ನು ಮೊದಲೇ ಕೊಟ್ಟಿದ್ದಾರೆ. 'ಸದ್ಯಕ್ಕಿರಲಿ. ನಿಮ್ಮ ಛಲಕ್ಕೆ ನಮ್ಮ ಹಾರೈಕೆ. ಸಹಕಾರವೂ ಇದೆ. ಮುಂದುವರಿಯಿರಿ' ಎಂದು ಬರೆದ ಅವರ ಪ್ರೋತ್ಸಾಹಕ್ಕೆ ಮಾರುಹೋಗಿದ್ದೇವೆ.

ನಾವು 4ರೂ. ಅಂಚೆಚೀಟಿ ಅಂಟಿಸಿ 'ಹಂಗಾಮ'ವನ್ನು ಕಳಿಸುತ್ತಿರುವುದನ್ನು ನೋಡಿ, ಈಗಾಗಲೇ ನಮ್ಮ ಬಗ್ಗೆ ಕಾಳಜಿ ತೋರಿಸಿರುವವರು ಹಲವರು. ಅಂಕೋಲೆಯ ಶಿಕ್ಷಣತಜ್ಞ ವಿ.ಜೆ.ನಾಯಕ ಅವರು 'ಪೂರ್ತಿ ಚಂದಾ ಹಣ ಅಂಚೆ ಖರ್ಚಿಗೇ ಆಗಿಹೋಗುವುದಲ್ಲ' ಎಂದು ಕಳವಳ ವ್ಯಕ್ತಪಡಿಸಿ 'ಅಂಚೆವೆಚ್ಚಕ್ಕಾಗಿ ಇಟ್ಟುಕೊಳ್ಳಿ' ಎಂದು ಮತ್ತೂ 100ರೂ. ಕಳಿಸಿದ್ದಾರೆ. ಅವರ ಹಿರಿತನಕ್ಕಾಗಿ ನಮ್ಮ ಕಣ್ಣಲ್ಲಿ ಕೃತಜ್ಞತೆ ಮಿನುಗಿದೆ.

ಮಂಗಳೂರಿನಿಂದ ಕಾಲೇಜು ಪ್ರಾಂಶುಪಾಲ ನಾಗರಾಜರಾವ್ ಜವಳಿ ಅವರು ಕೂಡ '100 ರೂ. ಚಂದಾಹಣದಲ್ಲಿ 96 ರೂ. ಅಂಚೆಚೀಟಿಗೇ ವ್ಯಯವಾಗುವುದಾದರೆ ನನ್ನಿಂದ ನಿಮಗೆ ನಷ್ಟವಲ್ಲವೇ? ಈಗ ದಾರಿ ಯಾವುದು? ಇನ್ನೊಂದು ನೂರು ಕಳಿಸಲೇ? ಅಹಂಕಾರದ ಮಾತಲ್ಲ, ನನಗೆ ಹಂಗಾಮ ಓದಬೇಕು. ಆದರೆ ನಿಮಗೆ ನನ್ನಿಂದ ನಷ್ಟವಾಗಬಾರದು' ಎಂದು ಬರೆದಿದ್ದಾರೆ. ಅವರ ಕಾಳಜಿ ನಮ್ಮ ಹೃದಯ ತುಂಬಿ ಬರುವಂತೆ ಮಾಡಿದೆ.

ಮೈಸೂರಿನ ಮೆಡಿಕಲ್ ವಿದ್ಯಾರ್ಥಿನಿಯೊಬ್ಬರು ಅಕಸ್ಮಾತ್ತಾಗಿ 'ಹಂಗಾಮ' ತಲುಪದಿದ್ದುದಕ್ಕೆ ಖಾರವಾಗಿ ಬರೆದು, 'ನನ್ನ ಈ ಸಿಟ್ಟಿನ ಹಿಂದೆ, ಹಂಗಾಮದ ಬಗ್ಗೆ ನಾನು ಹೊಂದಿರುವ ಪ್ರೀತಿಯಿದೆ. ಅದನ್ನು ಅರ್ಥ ಮಾಡಿಕೊಳ್ಳುತ್ತೀರಿ ಎಂದು ಭಾವಿಸಿದ್ದೇನೆ' ಎಂದರು. ಅವರ ಅಭಿಮಾನಕ್ಕೆ ವಿಸ್ಮಿತರಾಗಿದ್ದೇವೆ.

ಕೊಪ್ಪದಿಂದ ವೈದ್ಯರಾದ ಡಾ.ಎಸ್.ಆರ್.ಕೋದಂಡರಾಮ್ ಅವರು 'ಹಂಗಾಮ'ದಲ್ಲಿ ಎ.ಎನ್.ಪ್ರಸನ್ನರ ಬರಹ ಓದಿ 'ಪ್ರಸನ್ನ ಮತ್ತು ನನ್ನ ಭೇಟಿಯಾಗಿ 30 ವರ್ಷಗಳಾದವು. ಅವರ ವಿಳಾಸ ಕೊಡಿ. ಹಳೆಯ ನೆನಪುಗಳನ್ನು ಮೆಲುಕು ಹಾಕುವ ಭಾಗ್ಯ ನನ್ನದಾಗಬಹುದು' ಎಂದು ಬರೆದಿದ್ದಾರೆ. ಅವರ ಸ್ನೇಹ ನವೀಕರಣಗೊಳ್ಳುವ ಹಂತದಲ್ಲಿ ಭಾಗಿಯಾಗುತ್ತಿದ್ದೇವಲ್ಲ ಎಂದು ಪುಳಕಗೊಂಡಿದ್ದೇವೆ.

ಇಷ್ಟನ್ನೂ ಈ ಸಲ ನಿಮ್ಮೊಂದಿಗೆ ಹಂಚಿಕೊಳ್ಳಬೇಕೆನ್ನಿಸಿತು.

**ಸಂಪಾದಕ**


# ಹಂಗಾಮ

ಸಂಪುಟ - 1 ಸಂಚಿಕೆ - 7
1 ಆಗಸ್ಟ್ 2004

ಸಂಪಾದಕ
**ವೆಂಕಟ್ರಮಣ ಗೌಡ**

**ರಕ್ಷಾ ಪುಟ ಕಲಾಕೃತಿ : ಸುಧಾಕರ ದರ್ಬೆ**
**ರಕ್ಷಾ ಪುಟ ವಿನ್ಯಾಸ : ಉಲ್ಲಾಸ್**
**ಸಂಚಿಕೆ ಕಲಾವಿದರು :** ಸೃಜನ್, ಹರಿಚರಣ್, ಸಿ.ವಿ.ಶೇಷಾದ್ರಿ ಹೊಳವನಹಳ್ಳಿ, ನಾಮದೇವ ಕಾಗದಗಾರ, ಪದ್ಮಾ ಕಾಮತ್, ಎಂ.ಎಲ್. ಸೋಮವರದ

ವಾರ್ಷಿಕ ಚಂದಾ : 100/-



**ವಿಳಾಸ :**
ಅವಧಿ ಪ್ರಕಾಶನ
ನಂ. 1, 2ನೇ ಮಹಡಿ, 1ನೇ ತಿರುವು,
ಆರ್. ಕೆ. ಸ್ಟ್ರೀಟ್, ಶೇಷಾದ್ರಿಪುರಂ,
ಬೆಂಗಳೂರು - 560 020
ದೂರವಾಣಿ : 23561058
ಈ-ಮೇಲ್: awadhi@sify.com

# ತೆನೆ...





# LOC

## ಲೈನ್ಸ್ ಆಫ್ ಕಂಟ್ರೋಲ್

ಆಯ್ಕೆ: ಕನಸು







ಪೊನ್ನಪ್ಪ
ಸೌಜನ್ಯ: ಮಿಡ್ ಡೇ

ವ್ಯಂಗ್ಯಚಿತ್ರಕಾರನೊಬ್ಬನು ಹೇಳಬೇಕಾದುದನ್ನು ಹೇಗೆ ಹೇಳುತ್ತಾನೆ ಎನ್ನುವುದು ಮುಖ್ಯ. ಬರೀ ಚಿತ್ರದಿಂದ ಹೇಳಬಹುದು. ಮಾತುಗಳನ್ನು ಸೇರಿಸಿಯೂ ಹೇಳಬಹುದು. ಚಿತ್ರದಿಂದ ಮಾತು ಹೇಳಿದ ವ್ಯಂಗ್ಯ ಚಿತ್ರ ಶ್ರೇಷ್ಠ ಎನ್ನುವ ಭಾವನೆ ಇದ್ದರೆ ಅದಕ್ಕೆ ಕಾರಣವಿದೆ. ವ್ಯಂಗ್ಯಚಿತ್ರ ಎನ್ನುವುದು ಚಿತ್ರದಿಂದಲೇ ಸಂವಹನ ಸಾಧಿಸಬೇಕಾದ ಮಾಧ್ಯಮ.

ಹಾಗಂತ ವ್ಯಂಗ್ಯಚಿತ್ರದಲ್ಲಿ ಸಂಭಾಷಣೆಗಳಿರುವುದರಲ್ಲಿ ತಪ್ಪೇನೂ ಇಲ್ಲ. ಆದರೆ ಬರೀ ಸಂಭಾಷಣೆಗಳಿಂದಲೇ ವ್ಯಂಗ್ಯಚಿತ್ರವಾಗುವಂತಿದ್ದರೆ ಅದು ವ್ಯಂಗ್ಯಚಿತ್ರಕಾರನ ಮಿತಿ. ಆಗ ಅದು ನಗೆಹನಿಯಾಗಿಬಿಡುತ್ತದೆ!

ಪೊನ್ನಪ್ಪ ಅವರ ವ್ಯಂಗ್ಯಚಿತ್ರಗಳನ್ನು ಗಮನಿಸಿ. ಅವರು ಕೆಲವಷ್ಟನ್ನು ಸಂಭಾಷಣೆಯಿಂದಲೂ ಹೇಳುತ್ತಾರೆ. ಮತ್ತೆ ಕೆಲವಷ್ಟನ್ನು ಸಾಂಕೇತಿಕವಾಗಿಯೂ ಹೇಳುತ್ತಾರೆ. ಆದರೆ ಪೊನ್ನಪ್ಪ ಹೆಚ್ಚು ಇಷ್ಟವಾಗುವುದು ಅವರ ಸಾಂಕೇತಿಕ ವ್ಯಂಗ್ಯಚಿತ್ರಗಳಿಗೆ.

ಇಲ್ಲಿರುವ ಎರಡು ಚಿತ್ರಗಳಲ್ಲಿ ಒಂದು ಸಾಂಕೇತಿಕವಾಗಿದೆ. ಸಾಮಾನ್ಯ ಕನಿಷ್ಠ ಕಾರ್ಯಕ್ರಮ ಕೇಂದ್ರ ಸರಕಾರಕ್ಕೆ ಸೃಷ್ಟಿಸಬಹುದಾದ ಸಂದಿಗ್ಧವನ್ನು ಇದು ವಿವರಿಸಿದರೆ, ಮತ್ತೊಂದು ಮಾನವೀಯ ಮುಖವುಳ್ಳ ಆರ್ಥಿಕ ಸುಧಾರಣೆಯನ್ನು ತಮಾಷೆ ಮಾಡುತ್ತಿದೆ. ಸಂಭಾಷಣೆಯಿದ್ದೂ ಪೊನ್ನಪ್ಪ ವ್ಯಂಗ್ಯಚಿತ್ರ ನಗೆಹನಿ ಆಗಿಲ್ಲ ಎನ್ನುವುದನ್ನು ಗಮನಿಸಿ.



ಕಥನ



ಎಸ್.ಎಸ್.ಪ್ರದೀಪ್ ಕುಮಾರ್

# ಸುನೈನಾ ತೀರಿಕೊಂಡಳು

❑ ಹಂಝ ಮಲಾರ್

ಆ ದಂಪತಿಗಳಿನ್ನೂ ದುಃಖದ ಕಾರ್ಮೋಡದಿಂದ ಹೊರ ಬಂದಿಲ್ಲ. ಸದಾ ಕೇಳಿ ಬರುತ್ತಿದ್ದ ಸಂಗೀತದ ಕಹಳೆ ಆ ಮನೆಯಿಂದ ಕೇಳಿಸುತ್ತಿಲ್ಲ. ಹಾಸ್ಯ, ನಗು, ಕೇಕೆ ಯಾವುದೂ ಇಲ್ಲ. ಮಾತು ಸ್ತಂಭನಗೊಂಡಂತಿತ್ತು. ಕಾಗೆಗಳೂ ಸುಳಿದಾಡದಷ್ಟು ನಿರ್ಜೀವದ ವಾತಾವರಣ ಅಲ್ಲಿ ಸೃಷ್ಟಿಯಾಗಿತ್ತು. ಆ ದಂಪತಿಯ ಸಂಬಂಧಿ ಮಹಿಳೆಯ ತಲೆ ಆಗಾಗ ಹೊರಗೆ ಕಾಣಿಸುತ್ತಿದೆಯೇ ಹೊರತು ಅಲ್ಲಿ ಬೇರೆ ಯಾರೂ ಕಾಣಿಸುತ್ತಿರಲಿಲ್ಲ.

ಮೂರು ದಿನದ ಹಿಂದೆ ಕುತುಬುದ್ದೀನ್ ಮತ್ತು ಶಾಹಿನ್‌ರ ಏಕೈಕ ಮಗಳು ಸುನೈನಾ ಅನಿರೀಕ್ಷಿತವಾಗಿ ಇಹಲೋಕ ತ್ಯಜಿಸಿದ್ದಳು. ಆ ನೋವು, ಆ ಘಟನೆಯನ್ನು ಇನ್ನೂ ಜೀರ್ಣಿಸಿಕೊಳ್ಳಲು ಆ ದಂಪತಿಗಳಿಗೆ ಸಾಧ್ಯವಾಗುತ್ತಿಲ್ಲ. ಅವರು ಕಳೆದ ಮೂರು ದಿನದಿಂದ ಬದುಕಿಯೂ ಸತ್ತಂತೆ ಇದ್ದಾರೆ. ಅವರಿಗೆ ಮಾತು ಹೊರಡುತ್ತಿಲ್ಲ, ತಿಂಡಿ ತಿನಿಸು ಬಾಯಿಗೆ ಹಿಡಿಸುತ್ತಿಲ್ಲ. ಸಂಬಂಧಿ ಮಹಿಳೆಯ ಒತ್ತಾಯದ ಮೇರೆಗೆ ಸ್ವಲ್ಪ ನೀರು ಕುಡಿದದ್ದನ್ನು ಬಿಟ್ಟರೆ ಬೇರೆ ಏನನ್ನೂ ಅವರು ತಿಂದಿಲ್ಲ.

ಕುತುಬುದ್ದೀನ್ ಒಬ್ಬ ಸಂಗೀತಕಾರ, ಗೀತೆ ರಚನೆಕಾರ. ಅವನದೇ ಅಭಿರುಚಿಯ ಶಾಹಿನ್ ಅವನ ಬಾಳಸಂಗಾತಿಯಾಗಿದ್ದಳು. ಏಕೈಕ ಕುಡಿಯಾಗಿದ್ದ ಸುನೈನಾಳನ್ನು ಕಳೆದ ಹತ್ತು ವರ್ಷದಿಂದ ಅವರು ಕಣ್ಣಲ್ಲಿ ಕಣ್ಣಿಟ್ಟು ಸಾಕಿ, ಸಲಹಿದ್ದರು. ಅಂಥ ಮಗಳು ಕಣ್ಮುಚ್ಚಿ ಇಹಲೋಕ ತ್ಯಜಿಸುವುದೆಂದರೆ? ಆರೋಗ್ಯವಾಗಿದ್ದ ಮಗಳು ಸುನೈನಾಳ ಪ್ರಾಣವನ್ನು ಯಾಕೆ ಇಷ್ಟು ಬೇಗ ತೆಗೆದುಕೊಳ್ಳಲಾಯಿತು? ಅವಳು ಮಾಡಿದ ತಪ್ಪಾದರೂ ಏನು? ಅವಳು ಈ ಸಾವನ್ನು ನಿರೀಕ್ಷಿಸಿದ್ದಳೇ? ಸಾವಿನ ಕ್ಷಣಗಣನೆ ಲಕ್ಷಣವೂ

ಅವಳಲ್ಲಿ ಆಗ ಕಾಣಿಸಿಕೊಳ್ಳಲಿಲ್ಲವಲ್ಲ? ಎಂದು ಕುತುಬುದ್ದೀನ್ ತನ್ನಲ್ಲೇ ಕೇಳಿಕೊಳ್ಳುತ್ತಾರೆ.

ಮೂರು ದಿನದ ಹಿಂದೆ ಶಾಲೆ ಬಿಟ್ಟ ಲವಲವಿಕೆಯಿಂದಲೇ ಮನೆಯ ಅಂಗಳ ತುಳಿದಿದ್ದ ಸುನೈನಾ ತಾಯಿಗೆ ಸಲಾಂ ಹೇಳಿದ್ದಳು, ತಿಂಡಿ ತಿಂದಿದ್ದಳು. ಹಾಗೇ ಹೋಮ್‌ವರ್ಕ್ ಮಾಡಲು ಸಿದ್ಧಳಾಗಿದ್ದಳು. ಆದರೆ ಇದ್ದಕ್ಕಿದ್ದಂತೆ ಅವಳು ಕುರ್ಚಿಯಿಂದಲೇ ಕುಸಿದು ಬಿದ್ದಿದ್ದಳು. ಅದೇ ಕ್ಷಣ ಮನೆಗೆ ಕಾಲಿಟ್ಟ ಕುತುಬುದ್ದೀನ್ ಮೋಳೇ ಎಂದು ಕೂಗಿದ್ದಾರೆ. ಆದರೆ ಅದಕ್ಕೆ ಸ್ಪಂದಿಸ ಬೇಕಾದ ಪ್ರಾಣ ಪಕ್ಷಿ ಆಗಲೇ ಹಾರಿ ಹೋಗಿತ್ತು.

ಮೋಳೇ ನನ್ನಲ್ಲಿ ಮಾತನಾಡುವುದಿಲ್ಲ. ಕೋಪವಾ ಎಂದು ಕೇಳುತ್ತಾ ಆಲಿಂಗಿಸಲೆಂದು ಕುತುಬುದ್ದೀನ್ ಮಗಳ ಬಳಿ ಬಂದಾಗ ಅವರು ಹೌಹಾರಿದ್ದರು. ಮಗಳ ಕಣ್ಣು ಅಡಿ ಮೇಲಾಗಿತ್ತು. ಹೆದರಿದ ಕುತುಬುದ್ದೀನ್ ಯಾ ಅಲ್ಲಾ... ನನ್ನ ಮಗಳಿಗೆ ಏನಾಯಿತು ಎಂದು ಕೇಳುತ್ತಾ ನಾಡಿ ಮುಟ್ಟಿದಾಗ ಅದು ಸ್ತಬ್ಧಗೊಂಡಿರುವುದು ಅರಿವಿಗೆ ಬಂದೊಡನೆ ಚೀರಿದ್ದರು. ಆ ಚೀರಾಟಕ್ಕೆ ಅಡುಗೆ ಕೋಣೆಯೊಳಗಿದ್ದ ಶಾಹಿನ್ ಏನಾಯಿತು ಎಂದು ಕೇಳಿ ಹೊರಗೆ ಬಂದಿದ್ದಳು. ಸುನೈನಾ... ಸುನೈನಾ... ಎಂದು ಕುತುಬುದ್ದೀನ್ ಚೀರುತ್ತಿದ್ದರೇ ಹೊರತು ಅವರ ನಾಲಗೆಯಿಂದ ಬೇರೆ ಯಾವ ಮಾತೂ ಹೊರಡುತ್ತಿರಲಿಲ್ಲ. ಹೆದರಿದ ಶಾಹಿನ್ ಮಗಳನ್ನು ತನ್ನ ಕೈಗೆತ್ತಿಕೊಂಡಾಗಲೇ ಅದು ನಿರ್ಜೀವವಾದುದು ಆಕೆಗೆ ಗೊತ್ತಾಯಿತು. ಮೋಳೇ... ಏನಾಯಿತು ನಿನಗೆ ಎಂದು ಆಕೆಯೂ ಕೇಳಿ ರೋದಿಸ ತೊಡಗಿದಳು. ಅವರಿಬ್ಬರ ಆರ್ಭಟ ಅಕ್ಕಪಕ್ಕದ ಮನೆಯವರಿಗೂ ಗೊತ್ತಾಯಿತು. ಅವರು ಓಡೋಡಿ ಬಂದು ಏನಾಯಿತು ಎಂದು ಕೇಳುತ್ತಾ, ವಿಷಯ ತಿಳಿದುಕೊಳ್ಳುತ್ತಾ ಸುನೈನಾಳ ಸ್ಥಿತಿ ಕಂಡು ವೈದ್ಯರ ಬಳಿ ಕರೆದುಕೊಂಡು ಹೋಗದೆ ಕೂಗ್ತೀರಲ್ಲ ಎಂದು ಹೇಳಿದ ಮೇಲೆಯೇ ಕುತುಬುದ್ದೀನ್‌ಗೆ ಪ್ರಜ್ಞೆ ಬಂದಂತಾಗಿತ್ತು. ಹಾಗೇ ಕುತುಬುದ್ದೀನ್ ಮತ್ತು ಶಾಹಿನ್ ವೈದ್ಯರ ಬಳಿ ಸುನೈನಾಳನ್ನು ಹೊತ್ತುಕೊಂಡು ಹೋದರು. ಗಡಿಬಿಡಿಯಲ್ಲಿದ್ದರೂ ಪರಿಸ್ಥಿತಿಯನ್ನು ಅರ್ಥೈಸಿಕೊಂಡ ವೈದ್ಯರು ಪರೀಕ್ಷಿಸುತ್ತಲೇ 'ಆಗಲೇ ಪ್ರಾಣ ಕಳಕೊಂಡಿದ್ದಾಳೆ' ಎಂದು ಘೋಷಿಸಿದರು. ಆ ಮಾತು ಹೊರ ಬೀಳುತ್ತಲೇ ಕುತುಬುದ್ದೀನ್ ಮತ್ತು ಶಾಹಿನ್ ಅರೆಜೀವವಾಗಿ ಬಿಟ್ಟರು. ಸಮಯ ಉರುಳುತ್ತಲೇ ಅವರ ಆಪ್ತರು, ಸಂಬಂಧಿಕರು, ಊರವರು ಸುನೈನಾಳ ದಫನ ಕಾರ್ಯದ ವ್ಯವಸ್ಥೆಗೆ ಮುಂದಾದರು. ಆ ರಾತ್ರಿ ಸುನೈನಾಳನ್ನು ದಫನ ಗುಂಡಿಗೆ ಇಡುವಾಗ ಕುತುಬುದ್ದೀನ್‌ನ ಕಣ್ಣಂಚಿನಲ್ಲಿ ನೀರು ಆಟವಾಡುತ್ತಿತ್ತು. ತನ್ನ ಮಗಳು ಸುನೈನಾ ಕಣ್ಮುಚ್ಚಿದ್ದಾಳೆ ಎಂದು ಯಾರಾದರೂ ಹೇಳಿಯಾರೇ? ಇನ್ಮುಂದೆ ಇವಳಿಗೆ ಇದೇ ಗುಂಡಿ ಶಾಶ್ವತ ತಾಣವಾಯಿತೇ ಎಂದು ಅವರು ತನ್ನಲ್ಲೇ ಕೇಳುತ್ತಾ ಹಲುಬಿದರು. ಮೃತದೇಹವನ್ನು ದಫನ ಗುಂಡಿಗೆ ಇಟ್ಟ ಮೇಲೆ ಕಲ್ಲು ಮುಚ್ಚಿ ಮಣ್ಣು ಹಾಕುವಾಗಲಂತೂ ಅವರ ಕರುಳು ಚುರ್ ಎಂದಿತು. ಪಾಪ, ಯಾವ ತಪ್ಪು ಮಾಡಿದ್ದಕ್ಕೆ ಅಲ್ಲಾಹು ಅವಳನ್ನು ತನ್ನೆಡೆಗೆ ಸೆಳೆದುಬಿಟ್ಟ? ಅವಳನ್ನು ಮರಣ ಅಪ್ಪುವ ಹರೆಯವೇ? ಎಂದೆಲ್ಲಾ ಅವರು ಕೇಳಿದರಾದರೂ ಕೂಡಾ ಅದಕ್ಕೆ ಉತ್ತರ ಸಿಗಲೇ ಇಲ್ಲ. ಆಪ್ತರು, ಸಂಬಂಧಿಕರ ಸಹಿತ ಎಲ್ಲರೂ ಆ ರಾತ್ರಿಯೇ ವಿರಮಿಸಿದರು. ಶಾಹಿನಾಳ ತಾಯಿ ತಂದೆ ಮರುದಿನ ಎದ್ದು ಹೋಗುವಾಗ ತಮ್ಮ ದೂರದ ಸಂಬಂಧಿ ಮಹಿಳೆಯೊಬ್ಬರನ್ನು ಸ್ವಲ್ಪ ದಿನ ನೀನಿಲ್ಲಿ ಇರು ಎಂದು ಸೂಚಿಸಿದ್ದರು. ಅದರಂತೆ ಆಕೆ ಅಲ್ಲಿ ನಿಂತು ಅಲ್ಪಸ್ವಲ್ಪ ಊಟ ತಿಂಡಿ ಮಾಡುತ್ತಿದ್ದಾರೆ ಯಾದರೂ ಕೂಡಾ ಅದನ್ನು ತಿನ್ನುವವರೇ ಇಲ್ಲ.

ಮೂರು ದಿನ ಕಳೆದರೂ ಕುತುಬುದ್ದೀನ್ ಮತ್ತು ಶಾಹಿನ್ ದುಃಖ, ನೋವಿನಿಂದ ಹೊರ ಬಂದಿಲ್ಲ. ತನ್ನ ಮಗಳನ್ನು ಯಾಕೆ ಅಲ್ಲಾಹು ಇಷ್ಟು ಬೇಗ ಪ್ರಾಣ ತೆಗೆದ? ಅವಳದ್ದು ತಪ್ಪು ಮಾಡುವ ಹರೆಯವಲ್ಲ. ಒಂದೇ ಒಂದು ಶೀತ, ಜ್ವರ, ನೋವು ಕೂಡಾ ಅವಳಿಗೆ ಆ ಕ್ಷಣಕ್ಕೆ ಇರಲಿಲ್ಲವಲ್ಲ? ಹಾಗಿದ್ದರೆ ನಾನು ತಿಳಿದೋ, ತಿಳಿಯದೆಯೋ ಮಾಡಿದ ತಪ್ಪಿಗೆ ಈ ಶಿಕ್ಷೆಯಾ? ಎಂದೂ ಅವರು ಯೋಚಿಸತೊಡಗಿದರು. ಆದರೂ ಉತ್ತರ ಸಿಗಲಿಲ್ಲ.

ಆಸ್ಪತ್ರೆಯ ಬೆಡ್ ಮೇಲೆ ಅದೆಷ್ಟೋ ಮಂದಿ ನರಳುತ್ತಿರುವುದನ್ನು, ತೊಟ್ಟಿಯಲ್ಲಿರುವ ಆಹಾರ ಹುಡುಕಿ ತಿನ್ನುವವರನ್ನು, ಹುಚ್ಚರನ್ನು ನಾನು ಕಂಡಿದ್ದೇನೆ. ಮಳೆಗಾಲದಲ್ಲಿ ಒದ್ದೆಯಾಗುತ್ತಾ, ಚಳಿಗಾಲದಲ್ಲಿ ಮುದುಡುತ್ತಾ, ಬೇಸಿಗೆ ಕಾಲದಲ್ಲಿ ಸೆಕೆ ಸೆಕೆ ಎನ್ನುತ್ತಾ ಅದೆಷ್ಟೋ ಮಂದಿ ಕಾಲ ಕಳೆಯುತ್ತಾರೆ. ಅವರಲ್ಲಿ ಕೆಲವರಿಗೆ ರೋಗವಿದೆ, ಮತ್ತೆ ಕೆಲವರಿಗೆ ರೋಗ ಶಮನವಾಗಿದೆ. ಇನ್ನು ಕೆಲವರು ಎಂಥ ತೊಟ್ಟಿಯ ಮಧ್ಯೆ ದಿನ ದೂಡುತ್ತಿದ್ದರೂ ಅವರ ಆರೋಗ್ಯ ಹದ

ಗೆಟ್ಟಿಲ್ಲ, ಅವರ ಉಸಿರು ಇನ್ನೂ ಹಸಿರಾಗಿಯೇ ಇದೆ. ಆದರೆ ನನ್ನ ಮಗಳು ಸುನೈನಾಳಿಗೆ ಯಾವ ರೋಗ ವಿತ್ತು? ಏನೂ ಇಲ್ಲದ ಅವಳನ್ನು... ಎಂದು ಹೇಳಿ ಕುತುಬುದ್ದೀನ್ ಕಣ್ಣೀರು ಸುರಿಸುತ್ತಾರೆ.

ಕುತುಬುದ್ದೀನ್‌ಗೆ ಈಗ 40ರ ಹರೆಯ. ತನ್ನ 27ನೇ ಹರೆಯದಲ್ಲಿ ಶಾಹಿನಾಳನ್ನು ಅವರು ಮದುವೆ ಯಾಗಿದ್ದರು. ಕುತುಬುದ್ದೀನ್ ಸಂಗೀತಕಾರರಷ್ಟೇ ಅಲ್ಲ, ಗೀತ ರಚನೆಕಾರರೂ ಹೌದು. ಹಾಗಾಗಿ ಅವರನ್ನು ಸಮಾಜದ ಒಂದಷ್ಟು ಮಂದಿ ಚೆನ್ನಾಗಿ ಗುರುತಿಸಿದ್ದರು. ಮದುವೆಯಾಗಿ ಮೂರು ವರ್ಷದ ಮೇಲೆ ಶಾಹಿ ನಾಳು ಸುನೈನಾಳಿಗೆ ಜನ್ಮ ನೀಡಿದ್ದಳು. ಹಾಗೇ ಅವರು ಮಗಳನ್ನು ಪ್ರೀತಿಯಿಂದ ಸಲಹಿದ್ದರು. ಆಕೆಗೆ ಯಾವುದ ರಲ್ಲೂ ಅವರು ಕೊರತೆ ಮಾಡಲಿಲ್ಲ. ಕುತುಬುದ್ದೀನ್ ಅಷ್ಟು ಸ್ಥಿತಿವಂತರೇನೂ ಅಲ್ಲ, ಹಾಗಂತ ತೀರಾ ಬಡ ವರೂ ಅಲ್ಲ. ಸಂಗೀತ ನೀಡಿದ್ದಕ್ಕೆ, ಗೀತೆ ರಚಿಸಿದ್ದಕ್ಕೆ ಸ್ವಲ್ಪ ಹಣ ಸಂಪಾದಿಸುತ್ತಿದ್ದರು. ಅದರ ಜತೆಗೆ ಸಭೆ, ಸಮಾರಂಭಗಳ ಕಾರ್ಯಕ್ರಮ ನಿರ್ವಾಹಕರಾಗಿಯೂ ಸೇವೆ ಸಲ್ಲಿಸುತ್ತಿದ್ದರು. ಅವರ ಕಾರ್ಯಕ್ರಮ ನಿರ್ವಹಣೆ ಬಹುತೇಕ ಮಂದಿಗೆ ತುಂಬಾ ಇಷ್ಟವಾಗುತ್ತಿತ್ತು. ಆ ಸಭೆ ಗೊಂದು ಮೆರುಗು ಬರುತ್ತಿತ್ತು ಎಂದು ಸಭೆ ಸಮಾ ರಂಭಗಳನ್ನು ಆಯೋಜಿಸಿದವರೂ ಭಾವಿಸಿದ್ದರು. ದಿನಗಳೆದಂತೆ ಕಾರ್ಯಕ್ರಮ ನಿರ್ವಹಣೆ ಮಾಡಲು ಹೆಚ್ಚು ಬೇಡಿಕೆಯೂ ಬರತೊಡಗಿತು. ಕೆಲವರು ಅವರ ಸೇವೆಗೆ ಹಣ ನೀಡುವ ಪರಿಪಾಠ ಬೆಳೆಸಿದರು. ಅಂತಿಮವಾಗಿ ಅವರು ಸಂಗೀತ, ಗೀತರಚನೆ ಯೊಂದಿಗೆ ಸಭಾ ಕಾರ್ಯಕ್ರಮಗಳ ನಿರ್ವಾಹಕರೂ ಆದರು. ದಿನದಲ್ಲಿ ಒಂದೆರಡು ಕಾರ್ಯಕ್ರಮ ನಿರ್ವ ಹಣೆ ಮಾಡುವ ಅನಿವಾರ್ಯತೆಗೆ ಸಿಲುಕಿದ ಅವರಿಗೆ ಅದರಿಂದಲೇ ಸಂಸಾರ ಸಾಗಿಸಬೇಕಾಯಿತು.

ಕೆಲವು ಕಡೆ ಅವರು ಮುಖ್ಯ ಅತಿಥಿಯಾಗಿ ಭಾಗ ವಹಿಸುತ್ತಿರುವುದೂ ಉಂಟು. ಆವಾಗ ಅನೇಕ ಬಗೆಯ ಉಪದೇಶ ನೀಡುತ್ತಿದ್ದರು. ಒಟ್ಟಾರೆ ಅವರಿಗೆ ಮಾತುಗಾರಿಕೆಯ ಕಲೆ ಇದ್ದುದರಿಂದ ಅವರ ಭಾಷಣ, ಕಾರ್ಯಕ್ರಮ ನಿರ್ವಹಣೆಯನ್ನು ಎಲ್ಲರೂ ತುಂಬಾ ಖುಷಿಯಿಂದ ಸ್ವೀಕರಿಸುತ್ತಿದ್ದರು.

ಕುತುಬುದ್ದೀನ್ ಎಷ್ಟೇ ಉಪದೇಶ ನೀಡಿದರೂ ಅವರಲ್ಲಿ ಕೆಲವು ಮನುಷ್ಯ ಸಹಜ ತಪ್ಪುಗಳಾಗುತ್ತಿತ್ತು. ಆದರೆ ಬೇಸರದ ಸಂಗತಿ ಏನೆಂದರೆ, ಅವರು ಕೆಲವು ತಪ್ಪನ್ನು ಉದ್ದೇಶಪೂರ್ವಕವಾಗಿಯೇ ಮಾಡುತ್ತಿದ್ದರು. ಆವಾಗ ಅವರಿಗೆ ತಪ್ಪು ಎಂದು ಗೊತ್ತಾದರೂ ಕೂಡಾ ಯಾರ ಕಣ್ಣಿಗೆ ಕಾಣಿಸಲಿಲ್ಲವಲ್ಲ ಎಂದು ಭಾವಿಸುತ್ತಿದ್ದರು.

ನಾನು ಮಾಡಿದ ಇಂಥ ತಪ್ಪಿಗೆ ನನಗೆ ಬುದ್ಧಿ ಕೊಡುವ ಸಲುವಾಗಿ ಅಲ್ಲಾಹು ನನ್ನ ಮಗಳನ್ನು ತನ್ನೆಡೆಗೆ ಸೆಳೆದುಕೊಂಡನಾ ಎಂದು ಕುತುಬುದ್ದೀನ್ ತದೇಕ ಚಿತ್ತದಿಂದ ಆಲೋಚಿಸತೊಡಗಿದರು. ಹೌದು. ನಾನು ಮಾಡಿದ ತಪ್ಪಿಗೆ ಕ್ಷಮೆ ಕೇಳಬೇಕು. ಈ ಲೋಕ ಶಾಶ್ವತ ವಲ್ಲ, ಇಲ್ಲಿ ತಪ್ಪು ಮಾಡಿದರೆ ಪರಲೋಕದಲ್ಲಿ ನನಗೆ ಸುಖವಿಲ್ಲ, ನಾನು ಅನೇಕ ಮಂದಿಗೆ ಉಪದೇಶ ನೀಡಿದೆ. ಆದರೆ ಅದನ್ನು ನಾನು ಅನುಸರಿಸದೆ ತಪ್ಪಿನ ಮೇಲೆ ತಪ್ಪೆಸಗಿದೆ. ಯಾರೂ ನೋಡಿಲ್ಲ ಎಂದು ಭಾವಿ ಸಿದೆ. ನಮ್ಮ ತಪ್ಪುಗಳನ್ನು ಒಬ್ಬ ನೋಡುತ್ತಾನೆ ಎಂದು ಗೊತ್ತಿದ್ದೂ ಕೂಡಾ ಅವನ ಕಣ್ಣಿಗೆ ಮಣ್ಣೆರಚುವ ಪ್ರಯತ್ನ ಮಾಡಿದೆ. ಹೌದು, ನಾನು ಪರಿಶುದ್ಧನಾಗ ಬೇಕು. ನನ್ನ ತಪ್ಪುಗಳಿಗೆ ಕ್ಷಮೆ ಯಾಚಿಸಬೇಕು. ಮಾಡಿದ ಮೋಸ, ವಂಚನೆಗೆ ತಕ್ಕ ಪ್ರತಿಫಲ ಆಗಬೇಕು ಎಂಬ ನಿರ್ಧಾರಕ್ಕೆ ಕುತುಬುದ್ದೀನ್ ಬಂದರು. ಹಾಗಿದ್ದರೆ ನನ್ನ ಮತ್ತೊಂದು ಮುಖ ಬೆಳಕಿಗೆ ಬಂದಂತಾಗುವುದಿಲ್ಲವೇ ಎಂದು ಅವರ ಮನಸ್ಸು ಒಮ್ಮೆ ಕೇಳಿದರೂ ಕೂಡಾ ಇಲ್ಲ, ತಪ್ಪಿಗೆ ಕ್ಷಮೆ ಯಾಚಿಸಬೇಕು, ಮೋಸಕ್ಕೆ ತಕ್ಕ ಪರಿಹಾರ ನೀಡಬೇಕು ಎಂಬ ನಿರ್ಧಾರಕ್ಕೆ ಬಂದರು.

ಶಾಂತ ಚಿತ್ತದಿಂದ ಯೋಚಿಸುತ್ತಲೇ ಅವರಿಗೆ ಜ್ಞಾನೋದಯವಾದಂತಾಯಿತು. ಆ ಕ್ಷಣ ಅಲ್ಲೇ ಇದ್ದ ಅವರ ಹೆಂಡತಿ ಶಾಹಿನ್ ಗಂಡನ ಚಡಪಡಿಕೆಯನ್ನು ಗಮನಿಸಿ, ಏನಾಯಿತು ಎಂದು ಮೆಲ್ಲನೆ ಕೇಳಿದಳು.

'ಶಾಹಿನಾ...ನಾನು ಮಾಡಿದ ತಪ್ಪುಗಳಿಗೆ ಆ ಅಲ್ಲಾಹು ಮಗಳನ್ನು ಕಸಿದುಕೊಳ್ಳುವ ಮೂಲಕ ನನ್ನ ಕಣ್ತೆರೆಸುತ್ತಿದ್ದಾನೆ. ನಾನು ಈವರೆಗೆ ಮಾಡಿದ ಎಲ್ಲಾ ತಪ್ಪು, ವಂಚನೆಗಳಿಗೆ ಕ್ಷಮೆ ಕೇಳಿ ಸೂಕ್ತ ಪರಿಹಾರ ನೀಡಲೇಬೇಕಾಗಿದೆ' ಎಂದು ಕುತುಬುದ್ದೀನ್ ಹೇಳಿ ದಾಗ, 'ನೀವೇನು ಹೇಳ್ತಾ ಇದ್ದೀರಿ? ನಿಮಗೆ ಈಗ ಜ್ಞಾನೋದಯ...' ಎಂದು ಶಾಹಿನ್ ತನ್ನ ಮಾತನ್ನು ಅರ್ಧಕ್ಕೆ ನಿಲ್ಲಿಸಿದಳು.

'ಹೌದು, ಶಾಹಿನ್... ನಾನು ಪರಲೋಕದ ಬಗ್ಗೆ ವಿಶ್ವಾಸ ಇದೆ ಎಂದು ಹೇಳಿದೆನೇ ಹೊರತು, ಅದನ್ನು ಸಂಪೂರ್ಣ ನಂಬಲಿಲ್ಲ, ಆದರೆ ನನಗೀಗ ಜ್ಞಾನೋ ದಯವಾಗುತ್ತಿದೆ' ಎಂದು ಕುತುಬುದ್ದೀನ್ ಹೇಳಿ

ದರೂ ಕೂಡಾ ಅದನ್ನು ಸರಿಯಾಗಿ ಅರ್ಥೈಸಲಾಗದೆ ಶಾಹಿನ್ ಸುಮ್ಮನೆ ನರಳಿದರು.

ಕುತುಬುದ್ದೀನ್ ಅಂಗಳ ಇಳಿದರು. ಅವರಿಗೆ ಅಲ್ಲಿ ಬರೀ ಶೂನ್ಯ ಕಂಡಂತಾಯಿತು. ಮಗಳ ಅಗಲಿಕೆಯ ನೋವು ಒಂದೆಡೆ ಇತ್ತಾದರೂ ತಾನು ಮಾಡಿದ ಎಲ್ಲಾ ತಪ್ಪುಗಳಿಗೆ ಕ್ಷಮೆ ಯಾಚಿಸಿ ಪರಿಶುದ್ಧನಾಗುವ ತನ್ನದೇ ನಿರ್ಧಾರದಿಂದ ಒಂದಷ್ಟು ನೆಮ್ಮದಿಯಿತ್ತು. ಹಾಗೇ ತನ್ನ ನೆನಪಿಗೆ ಬಂದ ಎಲ್ಲಾ ತಪ್ಪುಗಳ ಒಂದು ಪಟ್ಟಿಯನ್ನು ಸಿದ್ಧಪಡಿಸುವ ಪ್ರಯತ್ನವನ್ನೂ ಮಾಡಿದರು.

**ಛೀ... ಎಂದದ್ದು**

ಆವಾಗ ತಾನು ಹದಿಹರೆಯಕ್ಕೆ ಕಾಲಿಟ್ಟ ವರ್ಷ. ತಂದೆ ಆಡಿದ ಯಾವುದೋ ಮಾತಿಗೆ ಪ್ರತಿಯಾಗಿ



ತಾನು ಅವರಿಗೆ ಛೀ ಎಂದಿದ್ದೆ. ಅದು ನಾನು ಮಾಡಿದ ಮೊದಲ ತಪ್ಪು. ಅದಕ್ಕೆ ಕ್ಷಮೆ ಯಾಚಿಸಲೇಬೇಕು, ಇಲ್ಲದಿದ್ದರೆ ನನಗೆ ನೆಮ್ಮದಿ ಇಲ್ಲ ಎಂದು ಹೇಳಿಕೊಂಡ ಕುತುಬುದ್ದೀನ್, ಸೀದಾ ತನ್ನ ತಂದೆಯ ಸಮಾಧಿಯ ಮುಂದೆ ಹೋಗಿ ನಿಂತರು. ಅವರು ನಿಧನ ಹೊಂದಿ ಆಗಲೇ ಹನ್ನೆರಡು ವರ್ಷವಾಗಿತ್ತು. ಆ ಸಮಾಧಿಯ ಮುಂದೆ ಅಳುಕಿ ನಿಂತ ಕುತುಬುದ್ದೀನ್, 'ಅಬ್ಬಾ... ಅವತ್ತು ನೀವು ನನ್ನನ್ನು ಯಾವುದೋ ವಿಷಯಕ್ಕೆ ಬೈದಿರಿ. ಕೋಪ ತಾಳಲಾರದೆ ನಾನು ನನ್ನ ಮನಸ್ಸಿನಲ್ಲೇ ಛೀ... ಎಂದೆ. ಅದು ನಿಮಗೆ ಗೊತ್ತಾಗಲಿಲ್ಲ. ಆದರೆ ಅಲ್ಲಾಹುವಿಗೆ ಅದು ಗೊತ್ತಾಗದಿರುತ್ತದಾ? ದಯವಿಟ್ಟು ನೀವು ನನ್ನ ಆ ತುಚ್ಛತನಕ್ಕೆ ಕ್ಷಮೆ ಕೊಡಿ' ಎಂದು ಹೇಳುತ್ತಲೇ ಕಣ್ಣೀರಿಳಿಸಿದರು. ತನ್ನ ತಂದೆ ಕ್ಷಮೆ ನೀಡಿದ್ದಾರೆ ಎಂಬುದಕ್ಕೆ ಸಾಕ್ಷಿ ಏನು ಎಂಬ ಪ್ರಶ್ನೆ ಅವರಿಗೆ ಆವಾಗ ಉಂಟಾಯಿತು. ಆದರೂ ಕೂಡಾ ಒಂದರ್ಧ ಗಂಟೆ ಅಲ್ಲೇ ಪ್ರಾರ್ಥಿಸಿ, ಕ್ಷಮೆ ಯಾಚಿಸಿ, ತಂದೆ ಕ್ಷಮಿಸಿದ್ದಾರೆ ಎಂಬ ಭಾವನೆಯೊಂದಿಗೆ ಅಲ್ಲಿಂದ ಮರಳಿ ಬಂದರು.

**ಮಾವಿನ ಹಣ್ಣು ತಿಂದದ್ದು**

ಅದಾದ ಮೇಲೆ ಸೀದಾ ಮೊಯಿದಿನಾಕರ ಮನೆಗೆ ಕುತುಬುದ್ದೀನ್ ಕಾಲಿಟ್ಟಾಗ ಅವರಿಗೆ ಆಶ್ಚರ್ಯವಾಗಿತ್ತು. ಮಗಳು ತೀರಿದ ಬೆನ್ನಿಗೆ ಇವರ್‍ಯಾಕೆ ಈ ಕಡೆ ಬಂದರು ಎಂದು ಆ ಮನೆ ಮಂದಿ ತಮ್ಮಲ್ಲೇ ಕೇಳಿಕೊಂಡರು. ಮೊಯಿದಿನಾಕ ಇಲ್ಲವಾ ದಾದ? ಎಂದು ಒಬ್ಬಾಕೆಯಲ್ಲಿ ಕೇಳಿದಾಗ, ಅವರು ಒಳಗಿದ್ದಾರೆ ಎಂಬ ಉತ್ತರ ಬಂತು. ಅದರಂತೆ, ಹಾಸಿಗೆ ಹಿಡಿದಿದ್ದ ಮೊಯಿದಿನಾಕರ ಬಳಿ ಹೋಗಿ 'ಕಾಕಾ... ನಾನು ಸಣ್ಣದಿರುವಾಗ ನಿಮ್ಮ ಮಾವಿನ ಮರದಿಂದ ಬಿದ್ದು ಸಿಕ್ಕಿದ ಒಂದು ಮಾವಿನ ಹಣ್ಣು ತಿಂದ ನೆನಪು. ನಿಮ್ಮ ಒಪ್ಪಿಗೆ ಇಲ್ಲದೆ ನಾನು ತಿಂದದ್ದರಿಂದ ನಾನು ಪಾಪ ಮಾಡಿದ್ದೇನೆ ಎಂಬ ಪ್ರಜ್ಞೆ ನನಗೀಗ ಕಾಡುತ್ತಿದೆ. ನಿಮ್ಮಲ್ಲಿ ಕೇಳದೆ ತಿಂದದ್ದಕ್ಕೆ ನೀವು ನನಗೆ ಕ್ಷಮೆ ಕೊಡಬೇಕು' ಎಂದು ಹೇಳಿದ ಕುತುಬುದ್ದೀನ್ ತಾನೇ ಆ ಮಾವಿನ ಹಣ್ಣಿಗೆ ಒಂದು ಬೆಲೆಯನ್ನು ನಿರ್ಧರಿಸಿ ಅದರ ಮೂರ್ಪಟ್ಟು ಹಣ ಕೊಟ್ಟರು. ಆ ಮಾತು ಕೇಳಿದ ಮೊಯಿದಿನಾಕ ಮತ್ತವರ ಮನೆಯವರು ಹೌಹಾರಿದರು. ಏನು, ನೀನೇನು ಹೇಳ್ತಾ ಇದ್ದೀಯಾ? ಅವತ್ತು ಮಾವಿನ ಹಣ್ಣು ತಿಂದದ್ದಕ್ಕೆ ಈಗ ಕ್ಷಮೆ ಕೇಳುವುದರ ಜತೆಗೆ 9 ರುಪಾಯಿಯನ್ನೂ ಕೊಡುತ್ತಿದ್ದೀಯಲ್ಲಾ. ಬೇಡ, ನನಗೀ ಹಣ ಬೇಡ. ಮಕ್ಕಳಾಟಿಕೆಯಲ್ಲಿ ಹೀಗೆ ತಿನ್ನದವರು ಯಾರಿದ್ದಾರೆ? ಎಂದು ಅವರು ಕೇಳಿದರು. ಆದರೂ ಕೂಡಾ ಕುತುಬುದ್ದೀನ್ ತನ್ನ ನಿಲುವಿನಿಂದ ಹಿಂದೆ ಸರಿಯಲಿಲ್ಲ. ಅವರ ಮನಸ್ಸಿಗೆ ಅರ್ಥವಾಗುವ ಹಾಗೆ ಹೇಳಿ ಅಲ್ಲಿಂದ ಹೊರ ಬಂದರು.

**ಕಾಮದ ಕಣ್ಣು**

ಪಕ್ಕದ ಮನೆಯ ಫಾಶಿಲ್ ಆಗ ತಾನೇ ಗಂಡನ ಮನೆಯಿಂದ ತವರು ಮನೆ ಸೇರಿದ್ದಳು. ಮೂರು

ಮಕ್ಕಳ ತಾಯಿಯಾಗಿರುವ ಆಕೆಯ ಬಳಿ ಹೋದ ಕುತುಬುದ್ದೀನ್, 'ಫಾಶಿಲ್ ನನ್ನ ಹದಿಹರೆಯದಲ್ಲಿ ನಾನೊಮ್ಮೆ ನಿನ್ನನ್ನು ಕಾಮದ ಕಣ್ಣಿನಿಂದ ನೋಡಿದ್ದೆ. ಅದು ನಾನು ಮಾಡಿದ ಮಹಾ ತಪ್ಪು. ಹಾಗಾಗಿ ಆ ತಪ್ಪಿಗೆ ಕ್ಷಮೆ ಕೊಡು. ಇಲ್ಲದಿದ್ದರೆ ನಾನು ಜೀವನ ಪೂರ್ತಿ ಪಾಪಪ್ರಜ್ಞೆಯಿಂದ ಕೊಳೆಯಬೇಕಾಗುತ್ತದೆ ಎಂದು ಹೇಳಿದಾಗ, ಅವಳು ಸುತ್ತಮುತ್ತಲೂ ಕಣ್ಣರಳಿಸಿದಳು. ಯಾರೂ ಇಲ್ಲದ ಸಮಯ ನೋಡಿ ಇವನು ನನ್ನನ್ನು ಮರಳುಗೊಳಿಸಲು ಯತ್ನಿಸುತ್ತಿದ್ದಾನಾ ಎಂಬ ಶಂಕೆ ಆಕೆಗೆ ಉಂಟಾಯಿತಾದರೂ ಕೂಡಾ ಯಾಕೋ



ಆ ನೋಟ, ಆ ಮಾತು, ಆ ವಿನಂತಿಯಲ್ಲೊಂದು ದಯೆ ಇರುವುದನ್ನು ಗಮನಿಸಿ 'ನೀನು ಏನು ಹೇಳ್ತಾ ಇದ್ದೀಯಾ? ನನಗೊಂದೂ ಅರ್ಥ ಆಗೋಲ್ಲ. ಆ ಹರೆಯದಲ್ಲಿ ಹಾಗೆಲ್ಲಾ ನೋಡುವುದು ಸಹಜ. ಅದಕ್ಕೆ ಈಗ ಯಾಕೆ ಕ್ಷಮೆ ಯಾಚಿಸಬೇಕು? ಎಂದು ಫಾಶಿಲ್ ಕೇಳಿದಳು. ಹಾಗೆಲ್ಲ ಕೇಳಬೇಡ ಫಾಶಿಲ್. ನೀನು ನನಗೆ ಕ್ಷಮೆ ಕೊಟ್ಟರೆ ಅದೇ ನೆಮ್ಮದಿಯ ವಿಷಯ ಎಂದಾಗ ಅವಳು ಉಪಾಯವಿಲ್ಲದೆ ಹ್ಞುಂ ಎಂದಳು. ತಟ್ಟನೆ ಅಲ್ಲಿಂದ ಕುತುಬುದ್ದೀನ್ ಎದ್ದು ಹೋದರೂ ಕೂಡಾ ಫಾಶಿಲ್‌ಗೆ ಕುತುಬುದ್ದೀನ್ ಒಗಟಾಗಿ ಕಂಡರು.

**ಮಸೀದಿಯ ಕಾಣಿಕೆ ಡಬ್ಬಿಗೆ ಕನ್ನ**

ಮಸೀದಿಯ ಅಧ್ಯಕ್ಷರ ಮನೆ ತುಳಿದ ಕುತುಬುದ್ದೀನ್ 'ನನ್ನ ಹದಿನೇಳನೇ ಹರೆಯದಲ್ಲಿ ನಾನು ಈ ಮಸೀದಿಯ ಕಾಣಿಕೆ ಡಬ್ಬಿಗೆ ಕೈ ಹಾಕಿ ಹಣ ತೆಗೆದಿದ್ದೆ. ಆದರೆ ಅದು ಬೆಳಕಿಗೆ ಬಂದಿರಲಿಲ್ಲ. ಆ ಪಾಪ ಪ್ರಜ್ಞೆ ನನಗೀಗ ಕಾಡುತ್ತಿದೆ. ಅವಾಗ ನಾನು 38.50 ಪೈಸೆ ಕದ್ದ ನೆನಪು. ಅದರ ಬದಲು ನಾನೀಗ 115.50 ರುಪಾಯಿಯನ್ನು ಕೊಡುತ್ತಿದ್ದೇನೆ. ದಯವಿಟ್ಟು ಅದನ್ನು ಸ್ವೀಕರಿಸಿ ಮನ್ನಿಸಿ ಬಿಡಿ' ಎಂದು ಹೇಳಿದಾಗ ಅವರು ಆಕಾಶ ನೋಡುವುದೊಂದೇ ಬಾಕಿ. ಸಣ್ಣಪ್ರಾಯದಲ್ಲಿ ಮಾಡಿದ ಕಳ್ಳತನಕ್ಕೆ ಈಗ ಕ್ಷಮೆಯಾ? ಮೂರ್ಪಟ್ಟು ಪರಿಹಾರವಾ? ಎಂದು ಅವರು ತನ್ನಲ್ಲೇ ಆಶ್ಚರ್ಯದಿಂದ ಕೇಳಿ ಕೈ ಹಿಸುಕಿಕೊಂಡರು. ನೀವು ಆಗುವುದಿಲ್ಲ ಎಂದು ಹೇಳಬೇಡಿ. ನನ್ನನ್ನು ಪರಿಶುದ್ಧ ಮನುಷ್ಯನನ್ನಾಗಿಸಲು ಸಹಕರಿಸಿ ಎಂದು ಕುತುಬುದ್ದೀನ್ ಹೇಳಿದಾಗ, ಅದನ್ನು ಜಮಾಅತರ ಮುಂದೆ ಹೇಳಲೆ? ಎನ್ನುತ್ತಾ ತನ್ನ ಮಾತನ್ನು ಅರ್ಧದಲ್ಲೇ ನಿಲ್ಲಿಸಿದರು.

ಜಮಾಅತರ ಮುಂದೆ ಹೇಳಿದರೂ ನನಗೆ ಅದರ ಬಗ್ಗೆ ಅಂಜಿಕೆ ಇಲ್ಲ. ನಾನು ತಪ್ಪು ಮಾಡಿದ್ದೇನೆ. ಅದಕ್ಕೆ ಕ್ಷಮೆ ಬೇಕು, ಪರಿಹಾರ ಸ್ವೀಕರಿಸಬೇಕು ಎಂದು ಕುತುಬುದ್ದೀನ್ ಹೇಳಿದಾಗ, ಮಸೀದಿ ಅಧ್ಯಕ್ಷರು ಉಪಾಯವಿಲ್ಲದೆ ಖತೀಬರ ಮುಂದೆ ಆ ಪ್ರಸ್ತಾಪವನ್ನಿಟ್ಟರು. ಆ ಮಾತು ಕೇಳಿ ಅವರೂ ಕೂಡಾ ಹೌಹಾರಿದರು. ಕೆಲವು ತಪ್ಪುಗಳನ್ನು ನಾನು ಮಾಡಿದರೂ ಕೂಡಾ ಮತಪ್ರಸಂಗದಲ್ಲಿ ನೀಡಿದ ಉಪದೇಶಗಳು ಈಗ ಅವರಿಗೆ ನೆನಪಾಗತೊಡಗಿತು. ಅವರು ಕುತುಬುದ್ದೀನ್‌ರ ನಿರ್ಧಾರದ ಮುಂದೆ ಕುಬ್ಜರಾಗಿ ಹೋದರು. ಆದರೂ ಉಪಾಯವಿಲ್ಲದೆ ಅದನ್ನು ಶುಕ್ರವಾರದ ಜುಮಾ ನಮಾಜ್‌ನ ನಂತರ ಹೇಳಿ, ನಿಮ್ಮಲ್ಲೂ ಯಾರಾದರೂ ಅಂತ ತಪ್ಪು ಮಾಡಿದ್ದರೆ, ಕ್ಷಮೆ ಯಾಚಿಸುವ ನಿರ್ಧಾರಕ್ಕೆ ಬಂದು ಆದರ್ಶರಾಗಿರಿ ಎಂಬ ಮಾತನ್ನೂ ಸೇರಿಸಿದರು. ಆದರೆ ಅಲ್ಲಿದ್ದ ಅನೇಕ ಮಂದಿಗೆ ತಮ್ಮ ತಪ್ಪು, ವಂಚನೆ ನೆನಪಾದರೂ ಕೂಡಾ ಅದನ್ನು ಬಹಿರಂಗಪಡಿಸುವ ಧೈರ್ಯ ಇರಲಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಅವರಿಗೆ ನಾಚಿಕೆ ಉಂಟಾಯಿತು. ಮೇಲ್ನೋಟಕ್ಕೆ ನನ್ನನ್ನು ಎಲ್ಲರೂ ಒಳ್ಳೆಯ ವ್ಯಕ್ತಿತ್ವದವರು ಎಂದು ಪರಿಗಣಿಸಿದ್ದಾರೆ. ಈಗ ನಾವು ಸಣ್ಣಪುಟ್ಟ ತಪ್ಪುಗಳನ್ನು ಎತ್ತಿ ತೋರಿಸಿ ಯಾಕೆ ಸಣ್ಣವರಾಗಬೇಕು ಎಂದು ಅನೇಕ ಮಂದಿ ಬಗೆದು ಸುಮ್ಮನಾದರು.

ಅಂತೂ ಕುತುಬುದ್ದೀನ್‌ರ ಈ ನಿರ್ಧಾರ ಊರಿನ ಬಹುತೇಕ ಮಂದಿಯಲ್ಲಿ ಆಶ್ಚರ್ಯ ಉಂಟು ಮಾಡಿತು. ಈ ಕಾಲದಲ್ಲಿ ಇಂಥ ಸತ್ಯ ನುಡಿಯುವುದೆಂದರೆ? ಮಗಳ ಅಗಲಿಕೆಯ ಪರಿಣಾಮವಾ? ಎಂದು ಅನೇಕ ಮಂದಿ ಹೇಳಿಕೊಳ್ಳತೊಡಗಿದರು.

ಅಷ್ಟೇ ಅಲ್ಲ, ಸಾಲ ವಂಚಿಸಿದ್ದು, ಅಂಗಡಿಯ

ಹೊರಗಿಟ್ಟ ಉಪ್ಪು ಕದ್ದು ಮನೆಗೆ ಕೊಂಡು ಹೋದದ್ದು, ಪಕ್ಕದ ಮನೆಯ ಮಾಡಿಗೆ ಕಲ್ಲು ಬಿಸಾಡಿ ಅವರನ್ನು ಹೆದರಿಸಿದ್ದು, ಹೋಟೇಲಲ್ಲಿ ಹೊಟ್ಟೆ ತುಂಬಾ ತಿಂದು ಹಣ ಕೊಡದೆ ತಪ್ಪಿಸಿ ಬಂದದ್ದು ಹೀಗೆ ಅನೇಕ ತಪ್ಪು ಗಳನ್ನು ನೆನಪಿಸಿದ ಕುತುಬುದ್ದೀನ್ ಅದಕ್ಕೆಲ್ಲಾ ಸಂಬಂಧ ಪಟ್ಟವರಲ್ಲಿ ಕ್ಷಮೆ ಯಾಚಿಸಿದರಲ್ಲದೆ, ಮೂರ್ಪಟ್ಟು ಹಣವನ್ನು ಪರಿಹಾರವಾಗಿ ನೀಡಿದರು. ಕುತುಬು ದ್ದೀನ್‌ರ ಇಂಥ ನಿರ್ಧಾರ ಮುಸ್ಲಿಮೇತರರಿಗೂ ಕೂಡಾ ಆಶ್ಚರ್ಯ ಉಂಟು ಮಾಡಿತ್ತು. ಈ ಕಾಲದಲ್ಲಿ ಇಂಥ ಸತ್ಯಹರಿಶ್ಚಂದ್ರ ಯಾರು ಎಂದು ಅವರು ತಮ್ಮಲ್ಲೇ ಕೇಳಿಕೊಳ್ಳತೊಡಗಿದರು.

ಎಲ್ಲಿಯವರೆಗೆ ಬಂತು ನಿಮ್ಮ ಕ್ಷಮಾಪಣೆ ಎಂಬ ಶಾಹಿನ್‌ಳ ಪ್ರಶ್ನೆಯಲ್ಲಿ ವ್ಯಂಗ್ಯ ಇದೆ ಎಂದು ಆರಂಭ ದಲ್ಲಿ ಕುತುಬುದ್ದೀನ್ ಭಾವಿಸಿದ್ದರೂ ಕೂಡಾ ಆ ಮಾತಿ ನಲ್ಲಿ ಭಾವುಕತೆ ಇರುವುದನ್ನು ಗಮನಿಸಿ, ನನ್ನ ನೆನಪಿಗೆ ಬಂದ ಅನೇಕ ತಪ್ಪು, ವಂಚನೆಗೆ ಕ್ಷಮೆ ಯಾಚಿಸಿ, ಪರಿ ಹಾರ ನೀಡಿದ ತೃಪ್ತಿ ನನಗಿದೆ. ಆದರೆ ಇನ್ನೂ ಒಂದು ತಪ್ಪನ್ನು ನಾನು ಮಾಡಿದ್ದೇನೆ. ಅದರ ನಿವಾರಣೆಗೆ ನಿನ್ನ ಸಹಕಾರ ಬೇಕು ಎಂದು ಹೇಳಿದರು.

ನಿಮ್ಮ ತಪ್ಪಲ್ಲಿ ನಾನು ಭಾಗಿಯಾಗಿದ್ದೇನಾ? ನಾನೇನು ತಪ್ಪು ಮಾಡಿಲ್ಲವಲ್ಲ ಎಂದು ಶಾಹಿನ್ ಹೇಳಿದಾಗ, ನೀನು ಮಾಡಿದ ತಪ್ಪಿಗೆ ಕ್ಷಮೆ ಯಾಚಿಸು ವುದು, ಪರಿಹಾರ ನೀಡುವುದು ಅದು ನಿನ್ನ ನಿರ್ಧಾರಕ್ಕೆ ಬಿಟ್ಟ ವಿಷಯ. ಆದರಲ್ಲಿ ನನ್ನ ಒತ್ತಡ ಇಲ್ಲ, ಅಂದ ಹಾಗೆ, ಮದುವೆ ಸಂದರ್ಭದಲ್ಲಿ ನಾನು 50 ಸಾವಿರ ನಗದು ಮತ್ತು 50 ಪವನು ಚಿನ್ನಾಭರಣ ನಿನ್ನ ತಂದೆ ಯಿಂದ ಕೇಳಿ ಪಡೆದಿದ್ದೇನೆ. ಖಾಲಿಯಾದ ಹಣವನ್ನು ನಾನು ತುಂಬಿಸುತ್ತೇನೆ. ಚಿನ್ನ ನಿನ್ನ ಮೈ ಮೇಲಿದೆ. ಅದ ನ್ನೀಗ ಮತ್ತೆ ನಿನ್ನ ತಂದೆಗೆ ಮರಳಿಸಬೇಕಾಗಿದೆ ಎಂದು ಕುತುಬುದ್ದೀನ್ ಹೇಳಿದರು.

ಇದೆಂಥ ಮಾತು ನಿಮ್ಮದು ಎಂದು ಶಾಹಿನ್ ಹೇಳಿ ದರೂ ಕೂಡಾ, ಮಗಳ ನೆನಪಾಗಿ ಆಯ್ತು, ನಿಮ್ಮಿಷ್ಟ ಎನ್ನುತ್ತಾ ತನ್ನ ಚಿನ್ನಾಭರಣ ಕೊಟ್ಟಳು. ಹಾಗೇ ಅದೇ ದಿನ ಮಾವನ ಮನೆಗೆ ಹೋಗಿ ಎಲ್ಲಾ ವಿಷಯ ಹೇಳಿ ದಾಗ ಅವರು ಕಕ್ಕಾಬಿಕ್ಕಿಯಾದರು. ಅವರಿಗೆ ಏನು ಹೇಳಬೇಕು ಎಂದು ಗೊತ್ತಾಗಲಿಲ್ಲ, ಅಳಿಯ ಬುದ್ಧಿ ಸ್ಥಿಮಿತ ಕಳಕೊಂಡಿದ್ದಾನಾ ಎಂದು ಒಂದು ಕ್ಷಣ ಅವರು ತನ್ನಲ್ಲೇ ಪ್ರಶ್ನಿಸಿಕೊಂಡರೂ ಕೂಡಾ ನಂತರ ಅವನ ಮಾತಿನ ಧಾಟಿಯನ್ನು ಗಮನಿಸಿ, ಈ ಚಿನ್ನ ಈ ಹಣ ಇನ್ನು ನನಗ್ಯಾಕೆ? ಅಂದು ನೀನು ಕೇಳಿದ್ದು ತಪ್ಪೆಂತ ಹೇಳುವುದಿಲ್ಲ. ಆದರೆ ನಾನು ಕೊಟ್ಟದ್ದು ತಪ್ಪು ಎಂದು ಮಾವ ಹೇಳಿದಾಗ, 'ಇಲ್ಲ ಅಂದು ನಾನು ಕೇಳಿದ್ದು ತಪ್ಪು, ನೀವು ಕೊಟ್ಟದ್ದು ತಪ್ಪಲ್ಲ' ಎಂದು ಕುತುಬುದ್ದೀನ್ ತನ್ನ ತಪ್ಪನ್ನು ತೋರಿಸುವ ಪ್ರಯತ್ನ ಮಾಡಿದರು. ವಿಷಯ ತಿಳಿದುಕೊಂಡ ಅತ್ತೆ ಏನಿದು, ಏನಾಯಿತು ಎಂದು ಕೇಳುತ್ತಿದ್ದಂತೆಯೇ ಕುತುಬುದ್ದೀನ್ ಚಿನ್ನ ಮತ್ತು ಹಣವನ್ನು ಮಾವನ ಕೈಗಿಟ್ಟು ಅಂಗಳ ಇಳಿದು ಹೋದರು.

ಕೊಡಿ, ಆದನ್ನು ನಾನು ಮಗಳಿಗೆ ಮುಟ್ಟಿಸುತ್ತೇನೆ. ಸುನೈನಾಳ ಅಗಲಿಕೆಯಿಂದ ಅವ ಈ ರೀತಿ ಮಾಡು ತ್ತಿದ್ದಾನೆ ಎಂದು ಹೇಳಿಕೊಂಡ ಆಕೆ ತನ್ನ ಗಂಡನ ಕೈಯಲ್ಲಿದ್ದ ಹಣ ಮತ್ತು ಚಿನ್ನಾಭರಣವನ್ನು ಕೈಗೆತ್ತಿಕೊಂಡರು.

ಮನೆಗೆ ತುಂಬ ಗೆಲುವಿನಿಂದಲೇ ಕಾಲಿಟ್ಟ ಕುತುಬುದ್ದೀನ್ ತನಗೆ ತಿಳಿದ, ನೆನಪಿಗೆ ಬಂದ ಎಲ್ಲಾ ತಪ್ಪಿಗೆ ಕ್ಷಮೆ ಯಾಚಿಸಿಯಾಯಿತು, ಪರಿಹಾರವನ್ನೂ ಕೊಟ್ಟಾಯಿತು. ಇನ್ಮುಂದೆ ನಾನು ಯಾವುದೇ ತಪ್ಪು ಮಾಡುವುದಿಲ್ಲ. ಆದರೂ ಅಪ್ಪಿತಪ್ಪಿ ತಪ್ಪಾದರೆ, ಅದನ್ನು ಮತ್ತಷ್ಟು ದೂರ ಮಾಡುವ ಸಲುವಾಗಿ ಆಯಾ ದಿನ ನಾನು ಎಷ್ಟು ಸತ್ಯ ಹೇಳಿದೆ, ಎಷ್ಟು ಸುಳ್ಳು ಹೇಳಿದೆ ಎಂದು ಲೆಕ್ಕ ಹಾಕಬೇಕು. ಹಾಗೇ ದಿನದಿಂದ ದಿನಕ್ಕೆ ಸುಳ್ಳಿನ ಸಂಖ್ಯೆಯನ್ನು ಕಡಿಮೆಗೊಳಿಸುತ್ತಾ ಪರಿಶುದ್ಧ ಮನುಷ್ಯನೆಂಬ ತೃಪ್ತಿಯೊಂದಿಗೆ ನೆಮ್ಮದಿಯಲ್ಲಿರಬೇಕು ಎಂದು ಆಶಿಸುತ್ತಲೇ ಹೆಂಡತಿಯ ಮುಖ ನೋಡಿದರು.

ಶಾಹಿನಾ... ಹುಟ್ಟು ಆಕಸ್ಮಿಕವಾದರೆ ಸಾವು ನಿಶ್ಚಿತ. ಆದರೆ ಮಗಳ ಬದಲು ನನ್ನ ಪ್ರಾಣವನ್ನು ಆ ಅಲ್ಲಾಹು ತೆಗೆದುಕೊಂಡಿದ್ದರೆ ಎಂದು ನೋವಿನಿಂದ ತನ್ನಲ್ಲೇ ಹೇಳಿ ಹೆಂಡತಿಯ ತಲೆ ಸವರುತ್ತಲಿರುವಾಗ ಕಾಗೆ ಕೂಗಾಡತೊಡಗಿತು. ಕಾಗೆಯ ಕೂಗು ಜೋರಾಗಿ ಕೇಳಿಸಿದಾಗ ಶಾಹಿನ್ ಕಿಟಕಿಯ ಬಾಗಿಲು ತೆರೆದು ನೋಡಿದಳು. ಆವಾಗ ದೂರದಿಂದ ತನ್ನ ಉಮ್ಮ ಬರು ವುದನ್ನು ಶಾಹಿನ್ ಕಂಡಳು. ಆವಾಗ ಅವಳಿಗೆ ಮತ್ತೊಮ್ಮೆ ತನ್ನ ಮಗಳು ನೆನಪಿಗೆ ಬಂದು ಹೋದಳು.

●



# ರಾಜೀ ನಿನ್ನ ನೆನಪಿನ ನೆರಳಲ್ಲಿ

ಅಮೃತ ಸ್ವರ

ಅವತ್ತು ಟ್ಯೂಷನ್ ಸೆಂಟರಿನಲ್ಲಿ ನೀ ಕಂಡಾಗ ಆ ಮುದ್ದು ಮುಖ, ಸ್ನಿಗ್ಧ ಸೌಂದರ್ಯ, ಅರಳು ಹುರಿದಂತಹ ಮಾತು, ಜಾಣ್ಮೆ, ಒಳ್ಳೆಯತನ ನನ್ನ ಮನಸ್ಸನ್ನು ಸೂರೆಗೊಂಡವು. ಆಗಲೇ ನಾನು, ನೀನು, ಸವಿ ಮುಕ್ತವಾಗಿ ಮಾತನಾಡುತ್ತಾ ಜೊತೆಯಾಗಿದ್ದು.

ನೆನಪಿದೆಯಾ, ಮಧ್ಯಾಹ್ನದ ಎಷ್ಟೋ ಗಳಿಗೆಗಳಲ್ಲಿ ನಾವಿಬ್ಬರೂ ಒಟ್ಟಾಗಿ ಒಂದೇ ಡಬ್ಬಿಯ ಊಟವನ್ನು ತುತ್ತು ತುತ್ತಾಗಿ ಉಂಡದ್ದು. ಹೆಚ್ಚು ಓದಿಕೊಳ್ಳದ ನನ್ನ ಬಗ್ಗೆ ತೀರಾ ಮುತುವರ್ಜಿ ವಹಿಸಿ ಬೈಯುತ್ತಿದ್ದೆ. 'ಇಷ್ಟೊಂದು careless ಬೇಡ್ವೆ' ಎನ್ನುತ್ತಿದ್ದ ನಿನ್ನ ಮೇಲಿನ ಅನುಕಂಪಕ್ಕಾಗಿ ಸುಮ್ಮನಿರುತ್ತಿದ್ದೆ. ಟ್ಯೂಶನ್ ಬೇಸರವಾಗಿ ಮೂವರು ಗ್ರೂಪ್ ಸ್ಟಡಿಗೆ ಒಲವು ತೋರಿ, ಸವಿ ಮನೆಯಲ್ಲಿ ಒಟ್ಟಾಗಿ ಕೂತು ಬರೋಬ್ಬರಿ ಓದಿದ್ದು.

ಹಾಗೆ ಓದುವಾಗಿನ ದಿನಗಳಲ್ಲೇ ನೀನೊಬ್ಬ ಅಪೂರ್ವ ಗೆಳತಿಯಾಗಿ ಒಲಿದಿದ್ದೆ. ಆಗ ಬರೆದಿಟ್ಟುಕೊಂಡ ನಿನ್ನ ಫೋನ್ ನಂಬರ್ ಇವತ್ತು ನನ್ನ ಪರ್ಸನಲ್ ಡೈರಿಯಲ್ಲಿದೆ.

'ಮರ್ತೇ ಬಿಟ್ಯೇನೆ, ಎಷ್ಟು ದಿನಾ ಆಯ್ತು ಸಿಕ್ಕಿ' ಅಂತ ದಿಢೀರನೇ ಫೋನ್ ಮಾಡಿ ಜಬರಿಸಿ, ನನಗೆ ಉತ್ತರ ಹೊಳೆಯದ ಹಾಗೆ ಮಾಡ್ತಿದ್ದೆಯಲ್ಲ!

ಯಾರೋ ಹೇಳಿದರು, 'ವಾಸವಿ ಟೀಚರ್ರು ಆತ್ಮಹತ್ಯೆ ಮಾಡಿಕೊಂಡ್ರಂತೆ' ಅಂತ. 'ನೀನಲ್ಲದಿದ್ದರೆ ಸಾಕಪ್ಪ' ಅನ್ನುತ್ತಾ ಪೇಪರ್‌ನಲ್ಲಿ ಸುದ್ದಿ ಓದಿದೆ. ನೀನೇನಾ ರಾಜಿ, ಹೀಗೆ ಮಾಡಿಕೊಂಡಿದ್ದು? ನಿನ್ನೊಂದಿಗೆ ಹಂಚಿಕೊಳ್ಳದ ಮಾತುಗಳೆಷ್ಟಿವೆ ಗೊತ್ತಾ? ನನಗೆ ಹೇಗೆ ತಾನೇ ಗೊತ್ತಾಗ್ಬೇಕು, ನೀನಿಷ್ಟು ತುರ್ತಾಗಿ ಏಕಾಏಕಿ ಹೊರಟುಹೋಗಲಿಕ್ಕೆ ಬಂದಿದ್ದೆ ಅನ್ನುವುದು? ನಂಬಲು ಸಾಧ್ಯವಿಲ್ಲ, ಆದ್ರೆ ನಿಜ.

ರಾಜೀ, ನನ್ನ ನೆನಪಿನಂಗಳದಲ್ಲಿ ನೀನು ಕುಳಿತು ಬಿಟ್ಟಿದ್ದೀಯಾ, ಅಂದಿನಂತೆ. ಕೆಂಪು ಸೆಲ್ವಾರ್, ಹೊಳಪಿನ ಕಣ್ಣು, ಬೆಳ್ದಿಂಗಳ ಮುಖ, ತುಂಟನಗು, ಹುಬ್ಬುಗಳ ನಡುವೊಂದು ಬೊಟ್ಟು. ನೀನೇ ನನ್ನೊಂದಿಗೆ ಕೂತು ಊಟ ಮಾಡುತ್ತಿದ್ದಂತೆ.

ರಾಜೀ ಈ ಕಂಗಳಿನ ಹನಿ, ನಿನ್ನ ನೆನಪಾದಾಗೆಲ್ಲ ಜಾರುತ್ತವೆ.

**ಡಿ.ನಳಿನ, ಚಿಕ್ಕಮಗಳೂರು**

# ಅವರ ಕನಸುಗಳಿಗೆ ನಾವೇನು ಕೊಟ್ಟಿದ್ದೇವೆ?

ಯಾಕೋ ಗೊತ್ತಿಲ್ಲ, ವಿನಾಕಾರಣ ಮತ್ತೆ ಮತ್ತೆ ನನ್ನ ಕಣ್ಣ ಮುಂದೆ ಆ ಬೀದಿಮಕ್ಕಳ ಚಿತ್ರ ಬಿಡಿಸುವ ಸ್ಪರ್ಧೆಯ ಕಾರ್ಯಕ್ರಮವೇ ಬರುತ್ತದೆ. ಆ ಮಕ್ಕಳು ತುಂಬಾ ನೆನಪಾಗುತ್ತಾರೆ. ಅವರ ಆ ಭಾವನೆಗಳನ್ನು ಹಿಡಿದಿಟ್ಟ ಕಣ್ಣುಗಳು, ಮುಗ್ಧಮುಖ ಮತ್ತೆ ಮತ್ತೆ ಕಾಡುತ್ತದೆ.

ಅವತ್ತು ರಿಪೋರ್ಟಿಂಗ್‌ಗೆ ಅಂತ ಅಲ್ಲಿ ಹೋಗಿದ್ದೆ. ಅದೆಷ್ಟು ಮಕ್ಕಳು ಅಲ್ಲಿ... ಎಲ್ಲ ಮಕ್ಕಳು ಚಿತ್ರ ಬಿಡಿಸುತ್ತಿದ್ದರು.

ಸಾಲಾಗಿ ನೋಡಿಕೊಂಡು ಬರುತ್ತಿದ್ದೆ. ಹೆಚ್ಚಿನ ಮಕ್ಕಳ ಕಲ್ಪನೆ 'ಮನೆ'. ನನಗೆ ಗೊತ್ತೇ ಆಗಲಿಲ್ಲ, ಮನೆ ಇಲ್ಲದ ಆ ಮಕ್ಕಳ ಕನಸು ಅಲ್ಲಿ ಮೂಡಿದೆ, ಅವರ ಆಸೆ ಅಲ್ಲಿ ಅಭಿವ್ಯಕ್ತವಾಗಿದೆ ಅಂತ.

ಒಬ್ಬ ಹುಡುಗನ ಪುಟ್ಟ ಮನೆಯ ಕೆಳಗೆ "ಎಮ್.ಜಿ.ರೋಡ್ ಬೇಡ, ವಿಧಾನಸೌಧ ಬೇಡ, ಒಂದು ಮನೆ ಸಾಕು" ಅನ್ನೋ ಬರಹ ಕಣ್ಣಿಗೆ ಕಾಣುವವರೆಗೂ ಆ ಪುಟ್ಟ ಮಕ್ಕಳ ಹೃದಯದ ಆಸೆ, ಕನಸು ನನಗೆ ಅರ್ಥವೇ ಆಗಲಿಲ್ಲ. ನನಗೇ ಅಲ್ಲ ತಮ್ಮ ಸೂರಲ್ಲಿ ಬೆಚ್ಚಗಿರುವ ಈ ನಾಗರಿಕ ಜಗತ್ತಿಗೆ ಅವರ ಅಳಲು ಕೇಳಿಸುವುದೇ ಇಲ್ಲ.

ಎಲ್ಲರಿಗೂ ಅದೊಂದು ಬೀದಿ ಮಕ್ಕಳ ಚಿತ್ರಸ್ಪರ್ಧೆ. ಮಕ್ಕಳನ್ನು ಒಟ್ಟುಗೂಡಿಸಿದ್ದೇವೆ. ಬರ್ತಾರೆ ಚಿತ್ರ ಬಿಡಿಸ್ತಾರೆ ಹೋಗ್ತಾರೆ. ಪ್ರಚಾರ ಸಿಕ್ಕುತ್ತೆ. ನಾಳೆ ಪೇಪರಲ್ಲಿ ಬರುತ್ತೆ. ನಾಲ್ಕು ಜನ ಹೊಗಳ್ತಾರೆ. ಸಂಸ್ಥೆಗಳ ಕಾರ್ಯಕ್ರಮದ ದಾಖಲೆಯಲ್ಲಿ ಇದೊಂದು ಪುಟವಾಗಿ ಜನರ ಮನಸ್ಸಿನಿಂದ ಮರೆಯಾಗಿ ಹೋಗಿಬಿಡುತ್ತೆ. ಆ ಪುಟ್ಟಮಕ್ಕಳ ಪುಟ್ಟ ಮನೆ, ಮನೆಯಲ್ಲಿ ಪುಟ್ಟ ಕನಸುಗಳು ಎಲ್ಲ ಅಲ್ಲೇ ಉಳಿದುಬಿಡುತ್ತವೆ. ಮಕ್ಕಳ ಕನಸಿನ ರೇಖೆಗಳು ಎಲ್ಲರಿಗೂ ಅಗೋಚರವೇ.

ಆ ಮಕ್ಕಳಿಗೂ ಎಷ್ಟು ಕಲ್ಪನೆ ಇತ್ತು. ಪುಟ್ಟ ಮನೆ. ಹತ್ತಿರದಲ್ಲಿ ಒಂದು ಸಣ್ಣ ಹೂದೋಟ. ಹಬ್ಬದ ದಿನ ಮನೆಗೊಂದು ಹಸಿರು ತೋರಣ, ಮುಂಜಾನೆ ಮುಂದಿನ ಅಂಗಳದಲ್ಲಿ ಚಂದದೊಂದು ರಂಗವಲ್ಲಿ. ಬೆಳದಿಂಗಳ ರಾತ್ರಿ ಕಿಟಕಿಯಲ್ಲಿ ನಗುವ ಚಂದ್ರ...

ಆ ಮಕ್ಕಳಿಗೂ ಮನೆ ಇದ್ದಿದ್ದರೆ... ಮಳೆಗಾಲವನ್ನ ಶಪಿಸದೆ, ಮಳೆಯ ನೀರಲ್ಲಿ ಆಡಬಹುದಿತ್ತು, ಚಳಿಯಲ್ಲಿ ಸೆಟೆದು ಹೋಗದೆ ಕಣ್ಣ ತುಂಬಾ ನೆಮ್ಮದಿಯ ನಿದ್ದೆ ಮಾಡಬಹುದಿತ್ತು. ಸೊಳ್ಳೆ, ಹಂದಿ, ನಾಯಿಗಳಿಂದ, ಮನುಷ್ಯರ ತಿರಸ್ಕಾರದಿಂದ ಬಚಾವಾಗಬಹುದಿತ್ತು ಅನ್ನಿಸಿತು.

ಅವತ್ತಿನಿಂದ ಮತ್ತೆ ಮತ್ತೆ 'ಬೂಟ್‌ಪಾಲಿಶ್ ಹುಡುಗ'ನ ಕತೆ ನೆನಪಾಗುತ್ತದೆ. ಆ ಬೂಟ್‌ಪಾಲಿಶ್ ಹುಡುಗ ಅಮ್ಮನಿಗೋಸ್ಕರ ಹಂಬಲಿಸುವ ಪರಿ, ತನ್ನ ತಾಯಿಗಾಗಿ ಆತನ ಹುಡುಕಾಟ, ಅಮ್ಮನ ಮಡಿಲಲ್ಲಿ ಬೆಚ್ಚನೆ ಮಲಗುವ, ಮಗುವಾಗುವ, ಪ್ರೀತಿಗಾಗಿ ಹಾತೊರೆಯುವ ಅವನ ಆ ನಿಷ್ಫಲ ಪ್ರಯತ್ನಗಳು... ಆ ಹುಡುಗನ ಕನಸು ಕೊನೆಗೂ ನನಸಾಗುವುದೇ ಇಲ್ಲ. ಹೈಸ್ಕೂಲಿನ ದಿನಗಳಲ್ಲಿ ಈ ಕತೆ ಓದಿದಾಗ ಎಷ್ಟೊಂದು ದುಃಖವಾಗಿತ್ತು.

ಮುಗ್ಧ ಮನಸ್ಸಿನ ಆ ಮಕ್ಕಳ ಕನಸು, ಆಸೆಯೆಲ್ಲ ಯಾಕೆ ನಾಗರಿಕರೆನಿಸಿಕೊಂಡ ನಮ್ಮ ಕಣ್ಣಲ್ಲಿ ತಿರಸ್ಕಾರಕ್ಕೆ ತುತ್ತಾಗಿ, ಬೆಲೆಯಿಲ್ಲದವುಗಳಾಗಿ ಕಾಣುತ್ತವೆ...? ಯಾಕೆ ನಾವು ಅವರಿಗೆ 'ಕನಸು ಕಾಣುವ ಹಕ್ಕಿಲ್ಲ' ಅಂತ ನಮ್ಮಷ್ಟಕ್ಕೇ ತೀರ್ಮಾನಿಸಿ ಬಿಡುತ್ತೇವೆ...? ನಮ್ಮ ಹೃದಯ ಯಾಕೆ ಇಷ್ಟು ಕಠೋರ...? ಯಾವ ತಪ್ಪಿಗೆ ಅವರಿಗೆ ಶಿಕ್ಷೆ...?

ತಾಯಿಗಾಗಿ ಕಾಯುವ ಬೂಟ್‌ಪಾಲಿಶ್ ಹುಡುಗ, ಅಕ್ಕನನ್ನು ಕಳೆದುಕೊಂಡು ಅನಾಥವಾಗಿರುವ ಲಂಕೇಶರ ಕ್ಯಾತ, ಮನೆ ಕನಸು ಹೊತ್ತ ಈ ಬೀದಿ ಮಕ್ಕಳು ಮತ್ತೆ ಮತ್ತೆ ಕಾಡುತ್ತಾರೆ. ಆದರೆ ನಾನು, ಈ ಸ್ವಾರ್ಥ ಸಮಾಜದ ಪ್ರತಿನಿಧಿಯಾಗಿ ನಿಟ್ಟುಸಿರ ಹೊರತು ಏನೂ ಮಾಡಲಾಗದೆ ಕುಳಿತಿದ್ದೇನೆ.

**ಶ್ರೀನಿಧಿ ಕರ್ಜೆ**

# ಆಲಬಮ್ಮಿನ ಹಾಳೆಗಳಲ್ಲಿನ್ನೂ ಧರ್ಮೇಚ ಕಾಮೇಚ ಅರ್ಥೇಚ ಪ್ರೋಸು

**ಅ**ಲ್ಲಿ, ಆಲ್ಬಮ್ಮಿನ ಹಾಳೆಗಳಲ್ಲಿ ನೀ ನಗುತ್ತಿದ್ದಿ. ನನ್ನ ಹಣೆಗೆ ಸಿಂಧೂರ, ಕೊರಳಿಗೆ ಹಾರ. 'ಬಲೀ ಕಾ ಬಕ್ರಾ' ಅಂದರೆ ಅದೇ ಅಂತ ಈಗ ಹೊಳೆಯುತ್ತಿದೆ ನನಗೆ. ಅಗೋ, ಅಲ್ಲಿ... ಲಾಜಾ ಹೋಮಕ್ಕೆ ಅರಲು ಸುರಿಯುತ್ತಿದ್ದಾನೆ ಅಣ್ಣ. ಈಗ, ಇಲ್ಲಿ? ಉರಿದು ಬೂದಿಯಾಗಿದ್ದೇನೆ ನಾನು, ಅಸ್ತಿತ್ವವೇ ಇಲ್ಲದಂತೆ....

ಎದೆ ತುಂಬಾ ಪ್ರೇಮವಿದೆ ಬಾರೇ ಅಂದವ ನೀನು, ಹನಿಯನ್ನೂ ಕೊಡದೆ ಯಾಕೆ ಸತಾಯಿಸಿಬಿಟ್ಟೆ? ನೀ

ಸಿಗದೇ ಸಿಕ್ಕುಬಿಟ್ಟೆ ಅಂದುಕೊಂಡೆ. ಸಿಗುವ ಮೊದಲೇ ಕಳಕೊಂಡೂ ಬಿಟ್ಟೆ!

ಅದ್ಯಾರು ಹೇಳು... ಮಂಟಪದಲ್ಲಿ ಕಳಸಗನ್ನಡಿ ಹಿಡಿದು ನಿಂತವಳು? ಮನೆ ತುಂಬುವ ಮೊದಲೇ ಒಡೆದು ಹಾಕಿದ್ದಳಲ್ಲ... ಕುಣಿಯಲಾರದೇ ನೆಲ ಡೊಂಕು ಅಂತ ತವರಿಗೆ ಮರಳಿದವಳು. ಅವಳೊಡೆದ ಕನ್ನಡಿ, ಮತ್ತೂ ನೂರು ಚೂರಾಯಿತು. ಜಿಕ್ಕಲೂ ಆಗುತ್ತಿಲ್ಲ ನನಗೀಗ. ಒಡೆದು ಹೋಗಿದೆ ಎದೆ ಕೂಡಾ.

ನನ್ನದೇ ಪ್ರತಿಬಿಂಬಕ್ಕಾಗಿ ತಡಕಾಡುತ್ತಿದ್ದೇನೆ ನಾನು. ಹೇಳು... ಎಷ್ಟೊಂದು ಚೂರುಗಳನ್ನಾಯ್ದು ತೇಪೆ ಹಾಕಲಿ?

ಮತ್ತೂ... ಆಲ್ಬಮ್ಮಿನ ಹಾಳೆಗಳಲ್ಲಿ ಧರ್ಮೇಚ, ಕಾಮೇಚ, ಅರ್ಥೇಚ... ಪೋಸು ಕೊಟ್ಟು ನಗುತ್ತಲೇ ಇದ್ದೀಯ ನೀನು!

**ಚೇತನಾ ಚಕ್ರವರ್ತಿ**

# ಆ ಹುಡುಗಿ ಕಂಗಳು ಬೆಳಕಾದವು

**ಆ**ಕೆ ಕೃತ್ತಿಕಾ. ಕಣ್ಣ ತುಂಬಾ ಇಂಜಿನಿಯರ್ ಆಗಬೇಕೆಂಬ ಕನಸು ಹೊತ್ತಿದ್ದಳು. ಮನೆಪಾಠಕ್ಕೆಂದು ಮುಂಜಾನೆ ಸ್ಕೂಟರ್‌ನಲ್ಲಿ ತೆರಳಿದವಳು ಅಪಘಾತಕ್ಕೆ ಈಡಾದ್ಲು. ನಗುಮುಖದ ಆಕೆ ಹೆತ್ತವರಿಗೆ ಒಬ್ಳೇ ಮಗ್ಳು. ಅವರಿಗೆ ಅರಗಿಸಿಕೊಳ್ಳಲಾರದ ನೋವು... ಆ ದುಃಖದಲ್ಲೂ ಆಕೆಯ ಎರಡೂ ಕಣ್ಣುಗಳನ್ನು ದಾನ ಮಾಡಿದ್ರು. ಇಬ್ಬರಿಗೆ ದೃಷ್ಟಿ ಭಾಗ್ಯ ನೀಡಿದ್ರು.

ಮೊನ್ನೆಯಷ್ಟೇ ಅವರ ಮನೆಗೆ ಹೋದಾಗ ಕೃತ್ತಿಕಾ ತಂದೆ ತಮ್ಮ ಮಗಳ ಬಗ್ಗೆ ಭಾವಪರವಶರಾಗಿ ಮಾತನಾಡ್ಲಿಕ್ಕೆ ಪ್ರಾರಂಭಿಸಿದ್ರು.

"ನನ್ನ ಮಗ್ಳು ಬೇರೆಯವರಿಗಿಂತ ವಿಭಿನ್ನವಾಗಿ ಯೋಚಿಸ್ತಿದ್ಲು. ಯಾರು ಏನೇ ಕೇಳಿದ್ರೂ ಕೊಡ್ತಿದ್ಲು. ಆರ್ಥಿಕವಾಗಿ ಹಿಂದುಳಿದವರಿಗೆ ಹಣ ತಗೊಂಡ್ಹೋಗಿ ಕೊಡ್ತಿದ್ಲು." ನಾನು ಏನು ಮಾತನಾಡ್ಬೇಕೆಂದು ತೋಚ್ದೆ ಸುಮ್ನೆ ಕೇಳ್ತಾ ಕೂತಿದ್ದೆ. ಕೃತ್ತಿಕಾ ತಂದೆ ಮಾತು ಮುಂದುವರಿಸಿದ್ರು.

"ಬದುಕಿದ್ದಷ್ಟು ದಿನ ಅರ್ಥಪೂರ್ಣವಾಗಿ ಬದುಕ್ಬೇಕೆಂದು ಕೃತ್ತಿಕಾ ಹೇಳ್ತಿದ್ಲು!..." ಅವರ ಕಣ್ಣಲ್ಲಿ ಕಂಬನಿ ಕೋಡಿಯಾಗಿ ಹರಿಯುತ್ತಿತ್ತು.

"ಆಕೆ ಬದುಕಿದ್ದಾಗ್ಲೂ ಉದಾರಿಯಾಗಿದ್ಲು. ಸತ್ತ ಮೇಲೂ ಬೇರೆಯವರ ಜೀವನದಲ್ಲಿ ಬದುಕಿರ್ಲಿ..." ತಾಯಿ ಸುಮಾ ಗದ್ಗದಿತರಾಗಿ ಹೇಳಿದಾಗ ಮನಸ್ಸಿನೊಳಗೆ ಏನೋ ನೋವು.

ಕೃತ್ತಿಕಾಳ ಮುಗ್ಧ ಮುಖದ ದೊಡ್ಡ ಭಾವಚಿತ್ರ ಟಿವಿಯೆದುರಿತ್ತು. "ಸತ್ತ ಮೇಲೂ ನನ್ನ ಜೀವನ ಅರ್ಥಪೂರ್ಣವೆನ್ನಿಸಿದೆ. ನಾನು ಸತ್ತಿಲ್ಲ. ದೃಷ್ಟಿಹೀನರಿಗೆ ಬೆಳಕ ನೀಡಿ ಅವರ ಜೀವನದಲ್ಲಿ ಜೀವಂತವಾಗಿದ್ದೀನಿ" ಎಂದು ಆಕೆ ಮೌನವಾಗಿ ಮಾತನಾಡುವಂತಿತ್ತು. ಬೊಗಸೆ ಕಣ್ಣುಗಳ ಕೃತ್ತಿಕಾ ಇಂಜಿನಿಯರ್ ಆಗಲಿಲ್ಲ. ಆದರೆ ಅದಕ್ಕಿಂತಲೂ ಹೆಚ್ಚಿನ ಸಾಧನೆಯನ್ನೇ ಆಕೆ ಮಾಡಿದ್ದಾಳೆ ಅಂತ ಅನ್ನಿಸ್ತು. ಅದನ್ನೇ ಆಕೆಯ ಹೆತ್ತವರಿಗೂ ಹೇಳಿ ಭಾರವಾದ ಹೃದಯದೊಂದಿಗೆ ಕೃತ್ತಿಕಾ ಮನೆಯಿಂದ ಹೆಜ್ಜೆ ಹಾಕಿದೆ.

ಹೌದು. ಕೃತ್ತಿಕಾ ಅಪರೂಪದ ಹುಡುಗಿಯಾಗಿದ್ಳು. ಹಾಗೇ ಆಕೆಯ ತಂದೆ ತಾಯಿ ಕೂಡಾ ಅಪರೂಪದ ವ್ಯಕ್ತಿತ್ವದವರು. ಎಲ್ಲರೂ ಇವರ ಹಾಗೇ ಇದ್ದಿದ್ರೆ ಪ್ರಪಂಚ ಎಷ್ಟು ಚೆನ್ನಾಗಿರ್ತಿತ್ತು ಅನ್ನಿಸ್ತು.

**ಜ್ಯೋತಿ ಇರ್ವತ್ತೂರು ಬೆಂಗಳೂರು**



ಪಿಕಾಸೋ



**ವಸುಂಧರೆ**

# ಕತ್ತಲೆಗೇ ಕಾಯಬೇಕಾದ ಇವರ ಪಾಡು ನೋಡಿ!

□ ಉಷಾ ಕಟ್ಟೇಮನೆ

**ಬ**ಹಿರಂಗವಾಗಿ ಹೇಳಿಕೊಳ್ಳಲು ಸಾಧ್ಯವಾಗದಂತಹ ಹಲವಾರು ಸಮಸ್ಯೆಗಳು ಹೆಣ್ಣುಮಕ್ಕಳಲ್ಲಿವೆ. ಅದು ಗಂಡು ಪ್ರಪಂಚಕ್ಕೆ ಅರ್ಥವಾಗಲು ಸಾಧ್ಯವೇ ಇಲ್ಲ. ಅರ್ಥವಾಗಬೇಕೆಂದು ನಾವು ಹಠ ಮಾಡುವುದು ಕೂಡಾ ಅರ್ಥವಿಲ್ಲದ್ದು.

ನಮ್ಮ ಗ್ರಾಮಾಂತರ ಪ್ರದೇಶದ ಶಾಲೆಗಳಿಗೆ ವಿಶಾಲವಾದ ಆಟದ ಮೈದಾನವಿರುತ್ತದೆ. ಕೊಠಡಿಗಳ ಸಂಖ್ಯೆ ಕಡಿಮೆಯಿದ್ದರೂ ಕಟ್ಟಡಕ್ಕೆ ಹಂಚಿನ ಮಾಡಿರುತ್ತದೆ. ಮೈದಾನದ ತುದಿಯಲ್ಲಿ ಬಾವಿಯಿರುತ್ತದೆ. ಶಾಲೆಯ ಸುತ್ತಲೂ ನಳನಳಿಸುವ ಕೈದೋಟವಿರುತ್ತದೆ.

ಹಳ್ಳಿಗಾಡಿನ ಶಾಲೆಗಳಲ್ಲಿ ಕಟ್ಟಡ, ಪರಿಸರ ಎಲ್ಲಾ ಎಷ್ಟೇ ಚೆನ್ನಾಗಿದ್ದರೂ ಶೌಚಾಲಯದ ವ್ಯವಸ್ಥೆ ಇರುವುದಿಲ್ಲ. ಹೆಣ್ಣುಮಕ್ಕಳಂತೂ ಮೂತ್ರ ವಿಸರ್ಜನೆಗಾಗಿ ಪಡುವ ಪಾಡು ಅತ್ಯಂತ ಮುಜುಗರದ್ದು. ಬಹುಶಃ ಶಾಲಾ ಕಟ್ಟಡಗಳನ್ನು ಕಟ್ಟುವವರು, ಅದರ ಮೇಲುಸ್ತುವಾರಿ ನೋಡಿಕೊಳ್ಳುವವರು, ಸರಕಾರ ಎಲ್ಲದರಲ್ಲೂ ಗಂಡಸರದೇ ಪ್ರಾಬಲ್ಯ. ಪ್ರಾಬಲ್ಯವೇನು ಬಂತು. ಅದರಲ್ಲಿ ಭಾಗಿಯಾಗುವವರೆಲ್ಲ ಅವರೇ. ಎಷ್ಟಾದರೂ ಪ್ರಕೃತಿ ಕರೆಗೆ ಮೋಟುಗೋಡೆಯನ್ನು ಅವಲಂಬಿಸುವವರು ತಾನೆ! ಹಾಗಾಗಿ ಅವರಿಗೆ ಹೆಂಗಸರ ಸಂಕಟ, ಸಮಸ್ಯೆಗಳು ಅರ್ಥವಾಗುವುದೇ ಇಲ್ಲ. ದೂರ ಪ್ರಯಾಣದ ರಾತ್ರಿ ಬಸ್ಸುಗಳಲ್ಲಿ ಸುಲಭ್ ಶೌಚಾಲಯ ಇರುವೆಡೆಗಳಲ್ಲಿ ಡ್ರೈವರ್ ಎಂದೂ ಬಸ್ಸು ನಿಲ್ಲಿಸುವುದೇ ಇಲ್ಲ. ಗಂಡಸರಿಗೆ ಬಯಲು ಪ್ರದೇಶವೇ ಬೇಕು ತಾನೆ?

ನಾವು ಶಾಲೆಗೆ ಹೋಗುವ ಕಾಲದಲ್ಲಾದರೆ ಶೌಚಾಲಯ ಇಲ್ಲದಿರುವುದು ಅಂತಹ ಸಮಸ್ಯೆಯೇನೂ ಅನ್ನಿಸುತ್ತಿರಲಿಲ್ಲ. ಯಾಕೆಂದರೆ ಶಾಲೆಯ ಸುತ್ತಮುತ್ತ ಎತ್ತರವಾಗಿ ಬೆಳೆದ ಪೊದೆ ಗಿಡಗಳ ಮರೆಯಿತ್ತು. ಇಲ್ಲವಾದರೂ, ದೇಹಬಾಧೆಯನ್ನು ತಡೆಮಕೊಳ್ಳುವುದು ಹೆಣ್ಣುಮಕ್ಕಳಿಗೆ ಸಾಮಾನ್ಯ ತಾನೆ?

ಈಗ ಈ ವಿಚಾರ ಅಷ್ಟು ಸರಳವಾಗಿಲ್ಲ.

ಪ್ರಪಂಚದಾದ್ಯಂತ ಈಗ ಹೆಣ್ಣುಮಕ್ಕಳು ದೈಹಿಕವಾಗಿ ಬಹುಬೇಗನೆ ಪ್ರವರ್ಧಮಾನಕ್ಕೆ ಬರುತ್ತಿದ್ದಾರೆ. ಹಿಂದೆಲ್ಲಾ ಸರಾಸರಿ ಹನ್ನೆರಡರಿಂದ ಹದಿನಾರು ವರುಷಕ್ಕೆ ಋತುಚಕ್ರ ಆರಂಭವಾಗುತ್ತಿತ್ತು. ಅದು ಈಗ ಎಂಟಕ್ಕೆ ಇಳಿದಿದೆ ಎಂದು ಚೀನಾದಲ್ಲಿ ನಡೆಸಿದ ಸಮೀಕ್ಷೆಯೊಂದು ಹೇಳುತ್ತಿದೆ. ಶೀತ ಪ್ರದೇಶಕ್ಕಿಂತ ಉಷ್ಣವಲಯದಲ್ಲಿ ಹುಡುಗಿಯರು ಬಹುಬೇಗನೆ ಕೌಮಾರ್ಯವನ್ನು ದಾಟಿ ಬರುತ್ತಾರೆ.

ನಾಲ್ಕನೇ ಕ್ಲಾಸಿನಲ್ಲಿ ಓದುತ್ತಿದ್ದ ಬಾಲೆಯೊಬ್ಬಳು ಋತುಮತಿಯಾಗಿದ್ದಳು. ಅವಳ ಅಮ್ಮ ದಿಕ್ಕು ತೋಚದೆ ಅಳುತ್ತ ಕುಳಿತದ್ದು, ಆ ಹುಡುಗಿ ಪಿಳಿಪಿಳಿ ಕಣ್ಣು ಬಿಡುತ್ತಾ 'ನನ್ನಿಂದ ಏನು ತಪ್ಪಾಗಿದೆ' ಎಂದು ತೋಚದೆ ಗಲಿಬಿಲಿಯಾದದ್ದು ಇತ್ತೀಚೆಗೆ ನನ್ನ ಗಮನಕ್ಕೆ ಬಂದ ವಿಚಾರ.

ಹೆಣ್ಣುಮಕ್ಕಳಿಗೆ ಇಂತಹದೊಂದು ಸೂಕ್ಷ್ಮ ಸಮಯದಲ್ಲಾದರೂ ತೀರಾ ಖಾಸಗಿ ಪರಿಸರ ಬೇಕು. ನಿರ್ಭೀತಿಯಿಂದ ಯಾವುದೇ ಅಳುಕು ಇಲ್ಲದೆ ಅದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಿಕೊಳ್ಳುವ ವಾತಾವರಣ ಬೇಕು. ಆದರೆ ಅಂತಹ ಪರಿಸರ ನಮ್ಮ ಗ್ರಾಮಾಂತರ ಶಾಲೆಗಳಲ್ಲಿ ಎಲ್ಲಿದೆ?

ನಮ್ಮ ಕಾಲದಲ್ಲಾದರೆ ವಾರಗಟ್ಟಲೆ ಶಾಲೆಗೆ ಬಾರದಿದ್ದರೂ ಯಾರೂ ಕೇಳುತ್ತಿರಲಿಲ್ಲ. ಈಗಿನ ಕಲಿಕಾ ವಿಧಾನ, ಬೋಧನಾ ಕ್ರಮ ಎಲ್ಲವೂ ಭಿನ್ನ. ಹಾಗಾಗಿ ನಾಲ್ಕೈದು ದಿವಸ ರಜೆ ಹಾಕುವಂತಿಲ್ಲ. ಸ್ಯಾನಿಟರಿ ನ್ಯಾಪ್‌ಕಿನ್‌ಗಳು ದುಬಾರಿ. ಅವು ನಗರ ಪ್ರದೇಶದ ಹೆಣ್ಣುಮಕ್ಕಳಿಗೆ ಮಾತ್ರ ಎಟುಕಬಲ್ಲವು.

ನಗರ ಪ್ರದೇಶದಲ್ಲಿ ಓದುತ್ತಿರುವ ಹೆಣ್ಣುಮಕ್ಕಳು ಈ ವಿಚಾರದಲ್ಲಿ ಪುಣ್ಯವಂತರು. ಅಲ್ಲಿ ಶಾಲೆಗಳಲ್ಲಿ ಹುಡುಗಿಯರಿಗೆಂದೇ ಪ್ರತ್ಯೇಕ ಶೌಚಾಲಯಗಳಿರುತ್ತವೆ. ಕೆಲವು ಶಾಲಾ ಕಾಲೇಜುಗಳಲ್ಲಿ ಮಹಿಳೆಯರಿಗಾಗಿಯೇ ವಿಶ್ರಾಂತಿ ಕೊಠಡಿಗಳಿರುತ್ತವೆ. ಅದೂ ಅಲ್ಲದೆ ಕೆಲವು ಶಾಲೆಗಳಲ್ಲಿ ಹುಡುಗಿಯರಿಗೆ ತುರ್ತು ಸನ್ನಿವೇಶಗಳಲ್ಲಿ ಸ್ಯಾನಿಟರಿ ಪ್ಯಾಡ್‌ಗಳನ್ನೇ ಒದಗಿಸುವ ವ್ಯವಸ್ಥೆ ಇದೆ. ಅದಕ್ಕಾಗಿಯೇ ನಿರ್ದಿಷ್ಟ ಮಹಿಳಾ ಟೀಚರ್‌ಗಳಿರುತ್ತಾರೆ.

ಖಾಸಗಿ ಶಾಲೆಗಳಲ್ಲಿ ಮಹಿಳಾ ಶಿಕ್ಷಕಿಯರೇ ಅಧಿಕ ಸಂಖ್ಯೆಯಲ್ಲಿರುತ್ತಾರೆ. ಹಾಗಾಗಿ ಅವರು ಕೆಲವು ಸಂದರ್ಭಗಳಲ್ಲಿ ಆಪ್ತ ಸಲಹೆಗಾರರಾಗಿಯೂ ಕಾರ್ಯ ನಿರ್ವಹಿಸುತ್ತಾರೆ. ಗುಣ ನಡತೆಗಳಿಂದ ಹಿಡಿದು ಬಟ್ಟೆ ಬರೆಯ ತನಕ ಅಕ್ಕನಂತೆ, ಗೆಳತಿಯಂತೆ, ತಾಯಿಯಂತೆ ಮಾರ್ಗದರ್ಶನ ನೀಡುತ್ತಾರೆ. ಈ ಭಾಗ್ಯ ಗ್ರಾಮಾಂತರ ಶಾಲೆಯ ಮಕ್ಕಳಿಗೆ ಎಲ್ಲಿಂದ ಬರಬೇಕು?

ನಮ್ಮ ಶಿಕ್ಷಣ ಪದ್ಧತಿಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಯಾರೂ ಗಂಭೀರವಾಗಿ ತೆಗೆದುಕೊಂಡೇ ಇಲ್ಲ. ಮಕ್ಕಳ ಮನಸ್ಸು ಚಿಗುರೊಡೆಯುವ ಕಾಲ ಅದು. ಅದು ಕೀಳರಿಮೆಯಿಂದ ಮುದುಡುವಂತೆ ಮಾಡಬಾರದು. ಮುಕ್ತವಾಗಿ ಹಾರಾಡಲು ಏನೆಲ್ಲಾ ವ್ಯವಸ್ಥೆ ಮಾಡಬೇಕೋ ಅದನ್ನು ಮಾಡಲೇಬೇಕು.

ಶಾಲೆಗೊಂದು ಶೌಚಾಲಯ ಕಟ್ಟುವುದಕ್ಕೆ ಲಕ್ಷಗಟ್ಟಲೆ ಹಣವೇನೂ ಬೇಕಾಗುವುದಿಲ್ಲ. ಊರಿನ ಗಣ್ಯ ವ್ಯಕ್ತಿಯೊಬ್ಬ ತನ್ನ ವೈಯಕ್ತಿಕ ಹಣದಿಂದಲೇ ಇದನ್ನು ಮಾಡಬಹುದು. ಚೆನ್ನಾಗಿ ಸಂಪಾದನೆಯಿರುವ, ವಿದೇಶಗಳಲ್ಲಿ ವಾಸಿಸುತ್ತಿರುವ ಹಳೆ ವಿದ್ಯಾರ್ಥಿಯೊಬ್ಬನೂ ಇದನ್ನು ಮಾಡಬಹುದು ಅಥವಾ ಊರಿನ ಯುವಕ ಮಂಡಲ-ಯುವತಿ ಮಂಡಲದಂತಹ ಸಾಮಾನ್ಯ ಸಂಘಟನೆ ಕೂಡಾ ಈ ವೆಚ್ಚವನ್ನು ಭರಿಸಬಹುದು. ಊರಿನಲ್ಲಿ ಯಾರಾದರೂ ಸತ್ತಾಗ ಅಥವಾ ಧಾರ್ಮಿಕ ಕಾರ್ಯಗಳನ್ನು ನಡೆಸುವಾಗ ಮಾಡುವ ಅನ್ನ ಸಂತರ್ಪಣೆಯಲ್ಲಿ ವಿನಿಯೋಗವಾಗುವ ಹಣದಲ್ಲಿ ಒಂದಂಶವನ್ನು ಉಪಯೋಗಿಸಿಕೊಂಡರೂ ಶೌಚಾಲಯ ನಿರ್ಮಾಣವಾಗುತ್ತದೆ. ಮದುವೆಗೆ ಖರ್ಚಾಗುವ ಹಣದಲ್ಲಿ ಶಾಲೆ ಕಟ್ಟಡವೇ ನಿರ್ಮಾಣವಾಗಬಹುದು. ಅದು ಬೇರೆ ವಿಷಯ.

ನಮ್ಮ ಶಾಲೆಯಲ್ಲಿ ಶೌಚಾಲಯ ಇದೆ ಬಿಡ್ರಿ ಎಂದು ಕೆಲವರು ಅನ್ನಬಹುದು. ಆದರೆ ಅವುಗಳಿಗೆ ನೀರಿನ ವ್ಯವಸ್ಥೆ ಇದೆಯಾ ನೋಡಿ. ಖಂಡಿತವಾಗಿಯೂ ಇರುವುದಿಲ್ಲ. ನಮ್ಮಲ್ಲಿ ಶೌಚಾಲಯ ನಿರ್ಮಿಸುವ ವಿನ್ಯಾಸವೇ ವಿಚಿತ್ರ. ಮೇಲ್ಛಾವಣಿ ಇಲ್ಲದ ಅರ್ಧ ಎತ್ತರಿಸಿದ ಗೋಡೆಗಳು. ಅದರೊಳಗೆ ಉದ್ದನೆಯ ಜಾಗವನ್ನೇ ಮೋಟು ಗೋಡೆಗಳಿಂದ ವಿಂಗಡಿಸಿ ಸ್ವಲ್ಪ ಎತ್ತರಿಸಿದ ಜಾಗ. ನಡೆದಾಡಲು ಕಿರುಹಾದಿ. ಒಳಗೆ ಪ್ರವೇಶಿಸಿದೊಡನೆ ವಿಸರ್ಜನೆ ಮಾಡಲು ಕೂತವರ ಹಿಂಬದಿ ಕಣ್ಣಿಗೆ ಬೀಳುತ್ತದೆ. ಪ್ರೈವೆಸಿಯೇ ಇಲ್ಲದ ವಾಕರಿಕೆ ಬರುವ ಜಾಗ. ಇಂತಹ ಪರಿಸರದಲ್ಲಿ ತಮ್ಮ ಹೆಣ್ತನವನ್ನು ಕಾಪಾಡಿಕೊಂಡು ನಮ್ಮ ಹುಡುಗಿಯರು ಬೆಳೆಯಬೇಕು. ಹುಡುಗಿಯರ ಹೆಣ್ತನದ ವಿಷಯದಲ್ಲಿ ನಮ್ಮ ಸಮಾಜ ಕಣ್ಣು ಮುಚ್ಚಿ ಕೂತಿದೆ. ಅಥವಾ ಅಸಡ್ಡೆಯಿಂದ ವರ್ತಿಸಿದೆ.

ಬಹುಶಃ ನಮ್ಮ ಗಂಡಸರಿಗೆ ಮಹಿಳೆಯರ ಒಳಜಗತ್ತು ಅರ್ಥವಾಗುವುದೇ ಇಲ್ಲವೇನೋ. ಸ್ನಾನಕ್ಕಾಗಿ, ಬಹಿರ್ದೆಸೆಗಾಗಿ ಕತ್ತಲಾಗುವುದನ್ನೇ ಕಾಯುತ್ತ ಕುಳಿತಿರುವ ಎಷ್ಟೋ ಮಹಿಳೆಯರು ನಮ್ಮ ಸುತ್ತಮುತ್ತಲೂ ಇದ್ದಾರೆ. ಸ್ವಲ್ಪ ಪ್ರಯತ್ನ ಪಟ್ಟರೆ ಇವರ ಬದುಕು ಹಸನುಗೊಳ್ಳಲು ಸಾಧ್ಯವಿಲ್ಲವೇ? ●



## ಪಾತ್ರ ಪ್ರಮಾಣ

# ಅಡುಗೆ ಮನೆಯ ಹುಡುಗಿ

ಅದು ಅವಳ ಮನೆ. ಬಾಗಿಲಿಲ್ಲ, ಕಿಟಕಿಯಿಲ್ಲ, ಹೊಗೆ ನಳಿಗೆಯೂ ಇಲ್ಲ. ಕೊನೆಗೊಂದು ಕಿರು ಕಿಂಡಿಯಾದರೂ... ಹಂಬಲಿಸುತ್ತಾಳೆ. ಅವಳೆಂದರೆ ಯಾರು? ವೈದೇಹಿ ಅವರ 'ಅಡುಗೆ ಮನೆ ಹುಡುಗಿ'. ಹಾಡು ನೇಯುವ ಹುಡುಗಿ, ಮೆಣಸಿನ ಜೊಟ್ಟು ಮುರಿಯುವ ಹುಡುಗಿ, ಹೊರಗೆ ಮಕ್ಕಳಾಡುವ ಸದ್ದಿಗೆ ಕಿವಿಗೊಡುವ ಹುಡುಗಿ ಅವಳು.

ನಾನೂ ಒಬ್ಬಳನ್ನು ಕಂಡಿದ್ದೆ. ಕಾಲೇಜು ಓದುವಾಗ ನನಗವಳು ಆತ್ಮೀಯ ಗೆಳತಿ. ನಾಟಕದಲ್ಲಿ ಪಾತ್ರವಾದರೆ ನಟನೆ ಅಬ್ಬಬ್ಬಾ. ಭಾಷಣಕ್ಕೆ ನಿಂತರೆ ಭೂಷಣ. ಮಾತು ನಯ, ನಾಜೂಕು, ಓದುವುದರಲ್ಲಿ ನುರಿತೆ. ನೋಡಲು ಪಕ್ಕನೆ ಕೇರಳದವಳೆಂದು ಕಾಣುವ ಕೆಂಪು ತಿಲಕದ ಮೇಲೊಂದು ಗಂಧದ ಬೊಟ್ಟಿಟ್ಟ ಚೆಲುವೆ. ಅಂತಹ ಸಕಲ ಗುಣ ಲಕ್ಷಣಗಳಿದ್ದ ಆಕೆಗೆ ಮದುವೆ ನಿಕ್ಕಿಯಾಯ್ತು. ಕೊನೆಯ ವರ್ಷದ ಡಿಗ್ರಿಯ ಕೊನೆಯ ಪೇಪರ್ ಬರೆಯುವ ಮುನ್ನ ಬಂದಿತ್ತಳು ಮದುವೆ ಕರೆಯೋಲೆ. ಸಂಪ್ರದಾಯಬದ್ಧ ಸಂಸಾರವೊಂದಕ್ಕೆ ಈಕೆ ಶಾಸ್ತ್ರೀಯ ಗೃಹಿಣಿಯಾಗಿ ಆಯ್ಕೆಯಾದಳು.



ಅವಳನ್ನೀಗ ಅಡುಗೆ ಮನೆ ಹುಡುಗಿಯಾಗಿ ನಾನು ಕಲ್ಪಿಸಿಕೊಳ್ಳುತ್ತಿದ್ದೇನೆ. ಅವಳ ನೆನಪಾದಾಗಲೆಲ್ಲಾ ನನಗೆ ವೈದೇಹಿಯವರ ಈ ಕವಿತೆಯೇ ನೆನಪು ಕಟ್ಟುತ್ತದೆ. ಯಾಕೆಂದು ಹೇಳುತ್ತೇನೆ. ಅವಳು ಮುಂದ್ಯಾವತ್ತೂ ಕಾಲೇಜು ಮೆಟ್ಟಿಲು ಹತ್ತಲಿಲ್ಲ, ಅಂದ ಮೇಲೆ ನಾಟಕದ ಬಣ್ಣ, ಭಾಷಣದ ಬಣ್ಣಗಳು ಇನ್ನು ಕೇಳಲೇಬಾರದು. ಮನೆಯಿಂದ ಹೊರ ಹೊರಡಬೇಕಾದರೆ ಅತ್ತೆ, ನಾದಿನಿಯರಲ್ಯಾರಾದರೊಬ್ಬರ ಬೆಂಗಾವಲು. ಬಿಟ್ಟರೆ 'ಇದೇ ಮನೆ, ಅಡುಗೆ ಮನೆ, ಆ ಮನೆ ಈ ಮನೆ ಗಟ್ಟಿ ಹೇಳಿದರೆ ಸ್ಮಶಾನವೂ ಸುಮ್ಮನೆ...' ಈಗವಳ ಮಾತು ಕೇಳಿಸುತ್ತಿಲ್ಲ, ವಿಶದವಾಗಿ ನಗುವುದಿಲ್ಲ.

ತನ್ನೆಲ್ಲ ಪ್ರತಿಭೆ, ಪ್ರಭೆಯನ್ನು ಅಡುಗೆ ಮನೆಯ ಕೈಗೊಪ್ಪಿಸಿ ಕುಳಿತ ಆಕೆ ಒಂದೊಮ್ಮೆ ಸಿಕ್ಕಿದ್ದಳು. ಮುಖ ಊದಿಕೊಂಡಿತ್ತು, ದಪ್ಪವಾಗಿದ್ದಾಳೆ ಎಂದುಕೊಳ್ಳುವಾಗ ಅಕ್ಕಪಕ್ಕ ಇಬ್ಬರು ಹೆಂಗಸರು ಕಂಡರು! ಕೊರಳ ತುಂಬ ಕರಿಮಣಿಯಿತ್ತು. ನಾನು ಮಾತಾಡ ಲಿಚ್ಛಿಸಿದಷ್ಟೂ ಅವಳ ಭಯ ಹೆಚ್ಚುತ್ತಾ ಹೋಯ್ತು. ಇನ್ನೇನು ಎದುರು ಸಿಕ್ಕವಳೊಡನೆ ಮಾತನಾಡಬೇಕೆಂದವನು ಸರ್ರನೆ ಅವರನ್ನು ದಾಟಿ ನಡೆದೆ. ಆಕೆ ಹಿಂದೆ ತಿರುಗಿ ಎತ್ತದ ಕೈಯಿಂದಲೇ, ಅಕ್ಕಪಕ್ಕದ ಹೆಂಗಳೆಯರಿಗೆ ಕಾಣದಂತೆ ವಿಶ್ ಮಾಡಿದಳು. ಆಗವಳ ಮುಖದಲ್ಲಿದ್ದ ಅಸಹಾಯಕ ಸ್ವೇದ ಬಿಂದು ಇನ್ಯಾರಲ್ಲೂ ನಾನು ನೋಡುವಂತಾಗುವುದು ಬೇಡ.

ಶಶಿವದನ, ಬೆಂಗಳೂರು



ಉಲ್ಲೇಖ

# ಏನಿದೆ ಸಮುದ್ರ, ನೀರೂ ಉಪ್ಪೂ ಭರತ ಬಿಟ್ಟು

❑ ರೋಹಿಣಿ ಚಂದ್ರ

ನಮ್ಮ ನೆಲದಲ್ಲಿ ಸಾಹಿತ್ಯಕವಾಗಿ ಮತ್ತು ಸಾಂಸ್ಕೃತಿಕವಾಗಿ ಜನಪರ ನಿಲುವು ನೆಲೆಗೊಂಡಿದ್ದು ವಚನ ವಾಙ್ಮಯದ ಹೊತ್ತಿಗೆ. ವಾಸ್ತವವೆಂದರೆ ವಚನಕಾರರು ತಾವು ಕವಿಗಳೆಂಬ ಪ್ರಜ್ಞೆಯಿಂದ ಕಾವ್ಯ ಕಟ್ಟಿದವರಲ್ಲ. ಅವರ ಪ್ರಜ್ಞೆಯಲ್ಲಿ ಮೂಲಭೂತವಾಗಿ ಇದ್ದದ್ದು ಮಾನವೀಯ ಕಾಳಜಿ. ಈ ಅಂತರಂಗದ ಆಶಯವನ್ನು ಜನರಿಗೆ ನೇರವಾಗಿ ತಲುಪಿಸುವ ಉದ್ದೇಶದಿಂದ ಅವರು ಅಭಿವ್ಯಕ್ತಿಗೆ ತೊಡಗಿದಾಗ, ಹಾಗೆ ಅಭಿವ್ಯಕ್ತಿಗೊಂಡದ್ದೆಲ್ಲ ತನ್ನಷ್ಟಕ್ಕೆ ತಾನೇ ಒಂದು ವಿಶಿಷ್ಟ ರೂಪದಲ್ಲಿ ಅಳವಡುತ್ತ ಹೋಯಿತು. ರಾಜನಲ್ಲಿ ಉನ್ನತ ಹುದ್ದೆಯನ್ನು ಪಡೆದಿದ್ದ ಬಸವಣ್ಣನಿಂದ ಹಿಡಿದು ಅಂಬಿಗರ ಚೌಡಯ್ಯ, ಕಟ್ಟಿಗೆ ಹೊರೆ ಮಾರಿ ಜೀವಿಸುತ್ತಿದ್ದ ಮೋಳಿಗೆಯ ಮಾರಯ್ಯನವರೆಗೆ ಧ್ವನಿಸಂದರ್ಭವೊಂದು ಜೀವ ಪಡೆಯಿತು. ಸಾಮಾಜಿಕ ನಿರ್ಬಂಧಗಳನ್ನೆಲ್ಲ ಕೆಚ್ಚೆದೆಯಿಂದ ತೊರೆದು ಬಂದು ಮನುಷ್ಯ ಸಹಜ ಸ್ವಾತಂತ್ರ್ಯದ ಆಕಾಂಕ್ಷೆಯನ್ನು ಅಕ್ಕಮಹಾದೇವಿಯಂಥ ಹೆಣ್ಣೊಬ್ಬಳು ಚಿತ್ರಿಸುವುದಕ್ಕೆ ಬೆಂಬಲವಾಗುವಂಥ ವಾತಾವರಣವೊಂದು ದೃಢವಾಯಿತು.

ಮಹಾಕವಿ ಪಂಪ 'ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ' ಎಂದು ತನ್ನ ಯುಗದ ಎರಡು ಪ್ರಧಾನ ಸಂಗತಿಗಳಾದ ರಾಜಸತ್ತೆ ಮತ್ತು ಧರ್ಮಸತ್ತೆಗಳಿಗೆ ಮಣೆ ಹಾಕಿದ. ಆಶ್ರಯದಾತ ರಾಜನನ್ನು ಹಾಡಿ ಹೊಗಳುವ ಲೌಕಿಕ ಕಾವ್ಯ ಸಂಪ್ರದಾಯವು ಒಂದು ರೀತಿಯ ಆತ್ಮಘಾತುಕತನವಾಗೇ ಕಾಣಿಸುತ್ತದೆ. ಆಳುವ ವರ್ಗವನ್ನು ಪ್ರತಿಭಟಿಸಬೇಕೆಂಬ ಮನೋಧರ್ಮ ಇದ್ದೂ ಅದನ್ನು ನೇರವಾಗಿ ಕಾವ್ಯದಲ್ಲಿ ತರಲಾರದ ಅಸಹಾಯಕತೆಯಲ್ಲಿ ಪಂಪನಂಥ ಮಹಾಕವಿಯೂ ನಲುಗಿರುವನೆನ್ನಿಸುತ್ತದೆ. ಆದರೆ ಬಸವಣ್ಣನ ಸಂದರ್ಭ ಇದಕ್ಕೆ ತೀರಾ ವಿರುದ್ಧವಾದದ್ದು. 'ಆನೀ ಬಿಜ್ಜಳಂಗಂಜುವೆನೆ' ಎಂಬ ಎದೆಗಾರಿಕೆ ಅಲ್ಲಿ ಸಾಧ್ಯವಾಗುತ್ತದೆ. ಸಮಾಜದ ಸರ್ವಾಂಗೀಣ ಪ್ರಗತಿಯ ಎಲ್ಲ ಮುಖಗಳನ್ನು ಕುರಿತ ಅತ್ಯಂತ ಆಧುನಿಕವೆನ್ನಬಹುದಾದ ವಿವೇಚನೆ ವಚನಕಾರರ ಧೋರಣೆಯಲ್ಲಿದೆ.

12ನೇ ಶತಮಾನದಲ್ಲಿ ವಚನಕಾರರಿಂದ ನಡೆದ ಕ್ರಾಂತಿ ಏಕಕಾಲಕ್ಕೇ ಸಾಮಾಜಿಕವೂ ಹೌದು. ಸಾಹಿತ್ಯಕವೂ ಹೌದು. ಸಾಮಾಜಿಕ ಜಡತೆಯನ್ನು ವಿರೋಧಿಸುತ್ತಲೇ ಸಾಹಿತ್ಯಕವಾಗಿರುವ ಚಲನಶೀಲತೆಯನ್ನು ತಂದದ್ದು ವಚನಗಳ ಹೆಚ್ಚುಗಾರಿಕೆ. ವಚನ ಸಾಹಿತ್ಯ ಇಂದಿಗೂ ಪ್ರಸ್ತುತತೆಯನ್ನು ಉಳಿಸಿಕೊಂಡಿರುವುದಕ್ಕೆ ಅದು ಸಾಮಾಜಿಕವಾಗಿ ಒಡಮೂಡಿಸಿದಂತಹ ಒಂದು ಚಲನಶೀಲತೆಯೇ ಕಾರಣ.

ಆಧುನಿಕ ಸಾಹಿತ್ಯವನ್ನು ಓದಿಕೊಳ್ಳುವಾಗ ಕೂಡ ವಚನ ಸಾಹಿತ್ಯ ಬೆರಗುಗೊಳಿಸುತ್ತದೆ. ಬರವಣಿಗೆ ಪರಿಸರಕ್ಕೆ ಆಪ್ತವಾದಷ್ಟೂ ಅದು ಜೀವನಕ್ಕೆ ಆಪ್ತವಾಗುತ್ತದೆ, ಜೀವನದ ಪರವಾಗಿ ನಿಲ್ಲುತ್ತದೆ ಎಂಬುದಕ್ಕೆ ವಚನ ಸಾಹಿತ್ಯವೇ ಬಹುದೊಡ್ಡ ಸಾಕ್ಷಿ.

ಬರವಣಿಗೆ ಜೀವನಕ್ಕೆ ಆಪ್ತವಾಗುವಲ್ಲಿನ ತೀವ್ರತೆಯಲ್ಲಿ ಮಾತ್ರ ಬರಹಗಾರನ ಸ್ವಾತಂತ್ರ್ಯಕ್ಕೆ ಅರ್ಥ ಬರುವುದು ಸಾಧ್ಯ. ಇನ್ನು ಬರಹಗಾರನ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವ ಸಂದರ್ಭಗಳು. ಇವನ್ನು ಪಟ್ಟಿ ಮಾಡುವುದಕ್ಕಿಂತ, ಸಮುದಾಯದ ಒತ್ತಡಗಳಲ್ಲಿ ಬರಹಗಾರ ಹೇಗೆ ಅಡಚಣೆಗಳನ್ನು ಅನುಭವಿಸಬೇಕಾಗುತ್ತದೆ ಎಂಬುದನ್ನು ಗಮನಿಸಬೇಕು.

ಲೇಖಕಿ ಸಾರಾ ಅಬೂಬಕರ್ 'ಮುಸ್ಲಿಂ ಸಂವೇದನೆ ಮತ್ತು ನಾನು' ಎಂಬ ಲೇಖನದಲ್ಲಿ ತಾವು ಅನುಭವಿಸಿದ್ದ ಇಂಥ ಅಡಚಣೆಗಳನ್ನು ಹೇಳಿಕೊಂಡಿದ್ದುಂಟು.

"ನನಗೆ ಎಲ್ಲಕ್ಕಿಂತ ನೋವಿನ ವಿಷಯವೆಂದರೆ ಪ್ರಗತಿಪರರು, ಕ್ರಾಂತಿಕಾರಿಗಳು ಎಂದು ಗುರುತಿಸಲ್ಪಟ್ಟವರೇ ನನ್ನೊಡನೆ ವರ್ತಿಸಿದ ರೀತಿ. ನನ್ನ 'ವಜ್ರಗಳು' ಕಾದಂಬರಿಯ ಬಿಡುಗಡೆಗಾಗಿ ಬಂದ ಮುಸ್ಲಿಂ ಲೇಖಕರು ತಮ್ಮ ಭಾಷಣದಲ್ಲಿ ನಮ್ಮ ಕಡೆಯವರೆಲ್ಲಾ ಮುಸ್ಲಿಂರಲ್ಲಿ ಇಂತಹ ಸಮಸ್ಯೆಗಳೇ ಇಲ್ಲ. ತಲಾಖ್ ಪದ್ಧತಿಯಾಗಲಿ, ಪುನರ್ವಿವಾಹ ಸಮಸ್ಯೆಯಾಗಲಿ ನಮ್ಮ ಕಡೆ ಇಲ್ಲವೇ ಇಲ್ಲ, ಇವೆಲ್ಲ ಇಲ್ಲಿ ಅಂದರೆ ಕೇರಳದ ಕಡೆಯ ಮುಸ್ಲಿಂರಲ್ಲಿ ಇರಬಹುದೇನೋ" ಎಂದು ಮೂಲಭೂತವಾದಿಗಳಂತೆ ನಮ್ಮ ಧರ್ಮ ಅತ್ಯುತ್ತಮ ಎಂದು ಸಾಬೀತುಪಡಿಸಲು ಪ್ರಯತ್ನಿಸುತ್ತಿದ್ದರು!...

"ನಮ್ಮೂರಿನ ಮೂಲಭೂತವಾದಿಗಳ ಮುಖವಾಣಿಯಾದ ಪತ್ರಿಕೆ ಕೂಡ ನನಗೆ ಕೊಟ್ಟ ಕಿರುಕುಳ ಅಷ್ಟಿಷ್ಟಲ್ಲ. ಇದನ್ನು ಸಹಿಸಲಾರದೆ ನಾನು ಇವರ ವಿರುದ್ಧ ಮಾನನಷ್ಟ ಮೊಕದ್ದಮೆ ಹೂಡಬೇಕಾಯಿತು. ಆಗಲೂ ಕೂಡ ಬಂಡಾಯ ಸಾಹಿತಿಯೆಂದು ಹೆಸರು ಪಡೆದ ಲೇಖಕಿಯೊಬ್ಬರು ನನಗೆ ಸಲಹೆ ನೀಡಿದರು: 'ನೀವು ಆ ಪತ್ರಿಕೆಯ ವಿರುದ್ಧ ಹಾಕಿದ ಕೇಸನ್ನು ಹಿಂತೆಗೆದುಕೊಳ್ಳಿ!"

ಸಾರಾ ಅವರ ಸಂದರ್ಭವನ್ನು ಒಟ್ಟು ಬರಹಗಾರರ ಸಂದರ್ಭವೆಂದೇ ಪರಿಗಣಿಸಬಹುದು. ಅಂತೆಯೇ ಸಾರಾ ಅವರ ಈ ಮಾತು ಬರಹಗಾರನೊಬ್ಬ ತನ್ನ ವಸ್ತುನಿಷ್ಠ ತೊಡಗಿಸಿಕೊಳ್ಳುವಿಕೆಯ ಹೊತ್ತಿನಲ್ಲಿ ಎದುರಿಸಬೇಕಾಗಿ ಬರುವಂಥ ಬಿಕ್ಕಟ್ಟನ್ನು ಸ್ಪಷ್ಟವಾಗಿ ತೋರಿಸುತ್ತದೆ.

ಸೃಜನಶೀಲ ಪ್ರಕ್ರಿಯೆಯ ವೇಳೆ ಪ್ರಹಾರದ ರೀತಿಯಲ್ಲಿ ಒದಗಿಬರುವ ಸಮುದಾಯದ ಒತ್ತಡಗಳೆಲ್ಲ ಒಂದಲ್ಲಾ ಒಂದು ರಾಜಕೀಯ ಉದ್ದೇಶದಿಂದ ಕೂಡಿದವುಗಳೇ ಆಗಿರುತ್ತವೆ. ಇಂಥ ಹೊತ್ತಿನಲ್ಲೆಲ್ಲ ದುರ್ಬಳಕೆಯಾಗುವುದು ಚರಿತ್ರೆ.

ಆದ್ದರಿಂದಲೇ ಬರಹಗಾರನಿಗೆ ಒಟ್ಟು ಸಾಮಾಜಿಕ ಮತ್ತು ರಾಜಕೀಯ ಸಂದರ್ಭದ ಅರಿವು ಇರಬೇಕಾದದ್ದು ಅವಶ್ಯವಾಗುತ್ತದೆ. ಸಾಹಿತ್ಯ ಮತ್ತು ಸಮಾಜದ ಕಾರ್ಯಕಾರಣ ಸಂಬಂಧವನ್ನು ಸಾಹಿತ್ಯಕ ಸಂದರ್ಭದಲ್ಲಿ ಅಲಕ್ಷಿಸಲು ಬರುವುದಿಲ್ಲ. ಸಾಹಿತಿಯೂ ಇತರರಂತೆ ಈ ಸಮಾಜದಲ್ಲೇ ತನ್ನನ್ನು ತಾನು ಕಂಡುಕೊಳ್ಳುವವ ಮತ್ತು ತನ್ನ ಬದುಕನ್ನು ಈ ಸಮಾಜದಿಂದಲೇ ಪಡೆದುಕೊಳ್ಳುವವ. ಸಮಾಜ ಮತ್ತು ರಾಜಕೀಯ ಬೇರೆಯಲ್ಲ ಎಂಬ ಅರಿವಿನಲ್ಲಿ ಮಾತ್ರ ಬರಹಗಾರ ತನ್ನ ಜವಾಬ್ದಾರಿಯನ್ನು ನಿರ್ವಹಿಸಬಲ್ಲ.

ಇಲ್ಲಿ ಬಾಂಗ್ಲಾದೇಶದ ಲೇಖಕಿ ತಸ್ಲಿಮಾ ಬಗ್ಗೆ ಪ್ರಸ್ತಾಪಿಸಬೇಕು. 'ಲಜ್ಜಾ' ಬರೆದು, ಖುರಾನ್ ಬಗ್ಗೆ ದಿಟ್ಟತನದಿಂದ ತನ್ನ ನಿಲುವು ವ್ಯಕ್ತಪಡಿಸಿದ್ದಕ್ಕಾಗಿ ದೇಶ ಭ್ರಷ್ಟಳಾದವಳು ಆಕೆ. ಹೆಣ್ಣಿಗೆ ದೇಹ ಮತ್ತು ಮನಸ್ಸಿನ ಸ್ವಾತಂತ್ರ್ಯವನ್ನು ಬಯಸುವ, ಸೆಕ್ಸ್ ಬಗ್ಗೆ ಹೆಂಗಸಿಗೆ ಹಕ್ಕಿದೆ ಎನ್ನುವ ತಸ್ಲಿಮಾ ಯೋಚನೆ ಸಹಜವಾದದ್ದು. ಹೀಗೆ ಸಹಜವಾಗಿ ಯೋಚಿಸುವ ರೀತಿಯೇ ನಿಜವಾಗಿಯೂ ರೆವಲ್ಯೂಷನರಿ ಪ್ರೋಸೆಸ್ ಆಗಿರುತ್ತದೆ.

ಮನುಷ್ಯನೊಬ್ಬ ಅವನು ಯಾವುದೇ ಸಮಾಜದವನಾಗಿರಲಿ, ಸಹಜತೆಗೆ ಆಪ್ತವಾಗಲಿಚ್ಛಿಸಿದಾಗ ಅದು ಆ ಸಮಾಜದ ಪಟ್ಟಭದ್ರತೆಯ ಬುಡಕ್ಕೆ ಚಳಿ ಹುಟ್ಟಿಸುತ್ತದೆ. ತಸ್ಲಿಮಾ ಚಿಂತನೆಯ ರೀತಿ ಅವಳ ಪರಿಸರದ ಮೂಲಭೂತವಾದಿಗಳನ್ನು ಕೆಣಕಿದ್ದು ಈ ನೆಲೆಯಲ್ಲಿ.

ಪಶ್ಚಿಮ ನೈಜೀರಿಯಾ ಕವಿ ವೋಲೆ ಷೋಯೆಂಕಾ ಹೇಳುವಂತೆ ಮನುಷ್ಯತ್ವವೆಂಬುದು ಉಳಿದೆಲ್ಲಕ್ಕಿಂತ ದೊಡ್ಡದು. ಬರಹಗಾರ ತನ್ನೊಳಗಿನ ಮನುಷ್ಯ ಸಾಮರ್ಥ್ಯದ ಮೂಲಕ ಸಮುದಾಯದೊಳಗಿನ ಮನುಷ್ಯನೊಂದಿಗೆ ಮಾತನಾಡಬೇಕು. ಸಾಹಿತ್ಯ ಹಾಗೆ ಅಪೀಲಾಗಬೇಕು. ಆಗಲೇ ನಾದವೊಂದು ಸಾಧ್ಯವಾಗೋದು.

ತೆಲುಗಿನ ಪ್ರಸಿದ್ಧ ಕ್ರಾಂತಿಕಾರಿ ಕವಿ ವರವರ ರಾವ್ ಅವರ ಕವಿತೆಯೊಂದರ ಕೆಲವು ಸಾಲುಗಳನ್ನು ಉದ್ಧರಿಸುವುದರೊಂದಿಗೆ ಈ ಬರಹವನ್ನು ಮುಗಿಸಬಹುದೆನ್ನಿಸುತ್ತದೆ.

ರಕ್ತದಲ್ಲಿ ಪ್ರತಿಧ್ವನಿಸುತ್ತಾ ಸಮುದ್ರ
ನನ್ನ ಹಾಡೊಳಗೆ ಪ್ರತಿಫಲಿಸುತ್ತಾ ಸಮುದ್ರ
ಬದುಕಿನ ಹೋರಾಟವ
ಸಮುದ್ರದ ಮೊರೆತದಲ್ಲಿ ಆಲಿಸಿದೆ
ಬದುಕಿನಾಳವ
ಸಮುದ್ರದ ವಿಸ್ತಾರದಲ್ಲಿ
ಬದುಕಿನ ರೀತಿಯ
ಹರಡಿಕೊಂಡಿರುವ ಸಮುದ್ರ ವೈವಿಧ್ಯದಲ್ಲಿ ಓದಿದೆ.
ಏನಿದೆ ಸಮುದ್ರ
ನೀರೂ ಉಪ್ಪೂ
ಭರತ ಬಿಟ್ಟು
ಏನಿದೆ ಜೀವನ
ಬೆವರೂ ರಕ್ತ
ಹೋರಾಟ ಬಿಟ್ಟು



ಪರಸಂಗ ಐತೆ

# ಡಿ.ವಿ.ಜಿ. ಜ್ಞಾಪಕ ಚಿತ್ರಗಳು

**ಮು**ದುವೀಡು ಕೃಷ್ಣರಾಯರು ಖ್ಯಾತ ವಾಗ್ಮಿಗಳು. ಒಮ್ಮೆ ಬೆಂಗಳೂರಿನಲ್ಲಿ ಅವರ ನಿರರ್ಗಳ ಮಾತು ಸಾಗಿತ್ತು: "ನಮ್ಮಲ್ಲಿ ಎಂಥೆಂಥ ಮಹಾಕವಿಗಳು ಆಗಿ ಹೋದರು. ಪಂಪ ಏನು! ರನ್ನ ಏನು! ಪೊನ್ನ ಏನು! ಜನ್ನ ಏನು!..." ಹೀಗೇ ಅವರು ಮಾತು ಮುಂದುವರಿಸಿದ್ದಾಗ ಅವರ ಪಕ್ಕದಲ್ಲೇ ಕುಳಿತಿದ್ದ ಡಿ.ವಿ.ಜಿ. ಕೃಷ್ಣರಾಯರನ್ನು ತಿವಿದರು. ಕೃಷ್ಣರಾಯರು ತಿರುಗಿದಾಗ ಡಿವಿಜಿಯವರು "ಪೊನ್ನ ಏನು? ಜನ್ನ ಏನು?" ಎಂದು ಕೇಳಿದರು. ಆಗ ಕೃಷ್ಣರಾಯರು ಹೇಳಿದರಂತೆ:

"ಅದನ್ನು ನಾವೇನು ಬಲ್ಲೆವಪ್ಪಾ! ನೀವೇ ಎಲ್ಲಾ ಹೇಳ್ತೀರಲ್ಲೋ!"

### ಇನ್ನೊಂದು ಸಂದರ್ಭ

ಒಮ್ಮೆ ಎಸ್.ನರಸಿಂಹಮೂರ್ತಿಯವರು ಕೈಯಲ್ಲಿ ತಂಬಿಗೆ ಹಿಡಿದು ಶೌಚಕ್ಕೆ ಹೊರಟಾಗ ಅವರ ತಲೆಯಲ್ಲಿ ದಿಢೀರಂತಾ ಒಂದು ಗಹನ ತಾತ್ವಿಕ ಪ್ರಶ್ನೆ ಕಾಡಿತು. "ಲೈಬ್ನಿಟ್ಸ್ ಹೀಗೆಂದಿದ್ದಾನೆ, ಆದರೆ ಸ್ಪಿನೋಜಾ ಹಾಗೆ ಹೇಳಿದ್ದಾನಲ್ಲ?"

ಅದಕ್ಕೆ ಡಿ.ವಿ.ಜಿ. ಕೇಳಿದರಂತೆ: "ಈ ವಿಷಯ ಈಗಲೇ ತೀರ್ಮಾನವಾಗಬೇಕೋ ಅಥವಾ ನೀವು ಶೌಚಕ್ಕೆ ಹೋಗಿ ಬರುವವರೆಗೆ ಕಾಲಾವಕಾಶ ಇದೆಯೊ?"

# ದ್ರೌಪದಿಯ ಬಗ್ಗೆ

'ಇಡೀ ಪ್ರಪಂಚದ ಪುರಾಣಗಳಲ್ಲಾಗಲಿ ಇತಿಹಾಸದಲ್ಲಾಗಲಿ ಸಮಕಾಲೀನ ಪುರುಷರೆಲ್ಲರಿಗಿಂತಲೂ ಬುದ್ಧಿವಂತಳೂ ಕುಶಲಳೂ ಆಗಿರುವ ಒಬ್ಬಳೇ ಹೆಣ್ಣು ಪ್ರಾಯಶಃ ದ್ರೌಪದಿ. ಆಕೆಯನ್ನು ಕೃಷ್ಣನೊಡನೆ ಹೋಲಿಸಿ ನೋಡುವ ಪ್ರಶ್ನೆ ಏಳುವುದಿಲ್ಲ, ಏಕೆಂದರೆ, ಸದಾ ಕುಶಲಳೂ ತಲಸ್ಪರ್ಶಿಯಾದ ಜ್ಞಾನವುಳ್ಳವಳೂ ಆದ ಈಕೆ ಕೃಷ್ಣನಿಗೆ ಆತ್ಮೀಯಳಾಗಿದ್ದಳು, ಜೊತೆಗಾತಿಯಾಗಿದ್ದಳು. ಆತನ ಲೀಲಾ ಜೀವನದಲ್ಲಿ ರಾಧೆ ಇದ್ದ ಹಾಗೆ ಕರ್ಮಜೀವನದಲ್ಲಿ ದ್ರೌಪದಿ ನಾಯಕಿಯಾಗಿದ್ದಳು. ಪ್ರೇರಣೆಯಾಗಿದ್ದಳು. ಮಹಾಭಾರತದಲ್ಲಿ ಕೃಷ್ಣ-ಕೃಷ್ಣೆಯರು ಸಮಾನ ಯೋಗ್ಯತೆಯ ನಾಯಕದ್ವಯರು, ಘರ್ಷಣೆಯ ಛಾಯೆಯೂ ಕಾಣದ ಸಹವರ್ತಿಗಳು.'

ರಾಮಮನೋಹರ ಲೋಹಿಯಾ ಅವರು ತಮ್ಮ 'ಸೌಂದರ್ಯ ಮತ್ತು ದೈಬಣ್ಣ' ಎಂಬ ಲೇಖನದಲ್ಲಿ ಹೇಳಿದ ಮಾತುಗಳಿವು.

# ಸೋನಿಯಾ ತೆಕ್ಕೆಯಲ್ಲಿ ಇಂದಿರಾ



**ಇ**ದು ಮೊನ್ನೆ 'ಟೈಮ್ಸ್ ಆಫ್ ಇಂಡಿಯಾ'ದಲ್ಲಿ ಪ್ರಕಟಗೊಂಡ ಚಿತ್ರ. ತಮಿಳ್ನಾಡಿನ ಕುಂಭಕೋಣಂಗೆ ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ಗಾಂಧಿ ಭೇಟಿ ನೀಡಿದ್ದಾಗ ತೆಗೆದದ್ದು.

ಚಿತ್ರದಲ್ಲಿ ಸೋನಿಯಾ ಎತ್ತಿಕೊಂಡಿರುವ ಮಗುವಿನ ಹೆಸರು ಇಂದಿರಾ. ಎಂಟು ತಿಂಗಳ ಹಸುಗೂಸು. ಈ ಮಗುವಿನ ಪಾಲಕರು ಕಾಂಗ್ರೆಸ್ ನಿಷ್ಠರು. ಅವರ ಇನ್ನಿಬ್ಬರು ಹೆಣ್ಣುಮಕ್ಕಳ ಹೆಸರು ಸೋನಿಯಾ ಮತ್ತು ಪ್ರಿಯಾಂಕ. ಅವರಿಬ್ಬರೂ ಅಗ್ನಿ ದುರಂತಕ್ಕೆ ಆಹುತಿಯಾಗಿಬಿಟ್ಟಿದ್ದಾರೆ.

ಒಮ್ಮೆಲೆ ಇಬ್ಬರು ಎಳೆ ಮಕ್ಕಳನ್ನು ಕಳೆದುಕೊಂಡ ಅವರು ದುಃಖ ನೀಗಿಕೊಂಡು ನಿಲ್ಲಲು ಈ ಹಸುಳೆ ಇಂದಿರಾ ಈಗ ಆಧಾರ.

# ದೇವಸ್ಥಾನ ಕಟ್ತಿದೀನಿ

**ದೇ**ವಾಲಯವೊಂದರ ನಿರ್ಮಾಣ ಸಾಗಿತ್ತು. ಕೆಲಸಗಾರರೆಲ್ಲ ಇಟ್ಟಿಗೆಗಳನ್ನು ಹೊರುತ್ತಿದ್ದರು. ಅಲ್ಲಿಗೆ ಬಂದ ಸನ್ಯಾಸಿಯೊಬ್ಬ "ನೀನು ಏನು ಮಾಡ್ತಾ ಇದ್ದೀಯಾ?" ಎಂದು ಕೆಲಸಗಾರನೊಬ್ಬನನ್ನು ಕೇಳಿದ. "ಕಾಣೆಸ್ತಿಲ್ವೆ, ಇಟ್ಟಿಗೆ ಹೊರ್ತಿದೀನಿ" ಎಂದ ಆತ ಧಿಮಾಕಿನಿಂದ. ಸನ್ಯಾಸಿ ಅದೇ ಪ್ರಶ್ನೆಯನ್ನು ಮತ್ತೊಬ್ಬ ಕೆಲಸಗಾರನಿಗೆ ಕೇಳಿದ. ಆತ "ಹೊಟ್ಟೆ ಪಾಡು ಸ್ವಾಮಿ, ದುಡೀತಾ ಇದ್ದೀನಿ" ಅಂದ. ಸನ್ಯಾಸಿ ಸ್ವಲ್ಪ ಮುಂದೆ ಹೋಗಿ ಮತ್ತೊಬ್ಬ ಕೆಲಸಗಾರನಿಗೆ "ನೀನೇನು ಮಾಡ್ತಿದೀಯ?" ಎಂದು ಕೇಳಿದ. ಆತ ಹೇಳಿದ:

"ನಾನು ದೇವರಿಗೆ ದೇವಸ್ಥಾನ ಕಟ್ಟೋ ಪುಣ್ಯದ ಕೆಲಸ ಮಾಡ್ತಿದೀನಿ."

# ಓಂಕಾರ

**ಪ್ರ**ಜಾಪತಿಯು ಒಮ್ಮೆ ಸಾರವತ್ತಾದ ವಸ್ತುಗಳ ಸಂಗ್ರಹಕ್ಕಾಗಿ ಮೂರು ಲೋಕಗಳನ್ನೂ ಕುದಿಸಿದನಂತೆ. ಆಗ ಮೂರು ಲೋಕಗಳ ಸಾರವಾಗಿ ಮೂರು ವೇದಗಳು ಉದಯಿಸಿ ಬಂದವು. ಆನಂತರ ಮೂರು ವೇದಗಳ ಸಾರವಾಗಿ ಭೂಃ ಭುವಃ ಸ್ವಃಗಳೆಂಬ ಮೂರು ಅಕ್ಷರಗಳು ಉತ್ಪತ್ತಿಯಾದವು. ಈ ಅಕ್ಷರಗಳ ಸಾರವೇ ಓಂಕಾರ.

ಭೂಮಿಯ ಸಾರ ಅಗ್ನಿ ಅಗ್ನಿಯ ಸಾರ ಋಗ್ವೇದ. ಅಂತರಿಕ್ಷದ ಸಾರ ವಾಯು. ಅದರ ಸಾರ ಯಜುರ್ವೇದ. ಸ್ವರ್ಗ ಲೋಕದ ಸಾರ ಆದಿತ್ಯ, ಆದಿತ್ಯನ ಸಾರ ಸಾಮವೇದ.

# ನಂಬಿಕೆ

**ಸೂ**ಫೀ ಸಾಹಿತ್ಯದಲ್ಲಿ ಬರುವ ಮುಲ್ಲಾ ನಸ್ರುದ್ದೀನ್ ಬದುಕಿನ ಒಂದು ಘಟನೆ.

ಮುಲ್ಲಾ ನಸ್ರುದ್ದೀನ್‌ಗೆ ಮದುವೆಯಾಯಿತು. ಅಂದು ಆತ ತನ್ನ ಮಡದಿ ಮತ್ತು ಬಂಧುಗಳೊಂದಿಗೆ ದೋಣಿಯಲ್ಲಿ ಪ್ರಯಾಣ ಹೊರಟಾಗ ದಿಢೀರನೆ ಬಿರುಗಾಳಿ. ನದಿಯಲ್ಲಿ ಪ್ರವಾಹ. ಪ್ರಯಾಣಿಸುತ್ತಿದ್ದ ದೋಣಿ ತಲ್ಲಣಿಸಿ ಎಲ್ಲರಿಗೂ ಪ್ರಾಣ ಭಯ ಮುತ್ತಿತು. ಆದರೆ ಮುಲ್ಲಾ ಮಾತ್ರ ಶಾಂತ ಮನಸ್ಸಿನವನಾಗಿಯೇ ಇದ್ದ. ಅದನ್ನು ಕಂಡು ಅವನ ಹೆಂಡತಿ, "ನಿಮಗೆ ಭಯವಾಗ್ತಿಲ್ಲವೇ?" ಎಂದು ಕೇಳಿದಳು.

ಹೆಂಡತಿಯ ಪ್ರಶ್ನೆಗೆ ಉತ್ತರಿಸದ ಆತ ತನ್ನ ಸೊಂಟದಲ್ಲಿದ್ದ ಕತ್ತಿಯನ್ನು ತೆಗೆದು ಹೆಂಡತಿಯನ್ನು ಇರಿಯುವುದಕ್ಕೆ ಬರುವವನ ಹಾಗೆ ಬಂದ. ಆಕೆ ಸ್ವಲ್ಪವೂ ಭಯಗೊಳ್ಳಲಿಲ್ಲ. "ಭಯ ಆಗ್ಲಿಲ್ವಾ?" ಎಂದು ಕೇಳಿದ. "ಕತ್ತಿ ನೋಡಿದರೆ ಭಯ ಆಗೋದು ಸಹಜ. ಆದ್ರೆ ಅದನ್ನು ಹಿಡಿದಿರುವವರು ನನ್ನ ಮೇಲೆ ತುಂಬಾ ಪ್ರೀತಿ ಇಟ್ಟರೋ ನನ್ನ ಗಂಡ. ಹಾಗಾಗಿ ಭಯವಾಗಲಿಲ್ಲ" ಎಂದಳು. ಆಗ ಮುಲ್ಲಾ, "ನಿನಗೆ ಹೇಗೆ ನನ್ನ ಮೇಲೆ ನಂಬಿಕೆಯೋ ನನಗೂ ಹಾಗೇ ಅಲ್ಲಾಹುವಿನ ಮೇಲೆ ನಂಬಿಕೆ. ಈ ಬಿರುಗಾಳಿ ಅಪಾಯಕಾರಿಯೇ ಆಗಿರಬಹುದು. ಆದರೆ ಅದನ್ನು ಆಡಿಸುತ್ತಿರುವ ಅಲ್ಲಾಹು ಕರುಣಾಮಯಿ" ಎಂದ.



# ಅಯ್ಯಯ್ಯೋ, ಚಪ್ಪಲಿ ಕಳೆದು ಹೋಗಿದ್ಯಲ್ಲ

**ಒ**ಬ್ಬಳು ತನ್ನ ಮಗುವಿನೊಂದಿಗೆ ಸಮುದ್ರ ತೀರಕ್ಕೆ ಹೋಗಿದ್ದಳು. ಅಲೆಗಳೊಂದಿಗೆ ಮಗು ಆಟವಾಡಿಕೊಂಡಿತ್ತು. ಇದ್ದಕ್ಕಿದ್ದಂತೆ ಒಂದು ಅಲೆ ಮಗುವನ್ನು ಸೆಳೆದುಕೊಂಡುಬಿಟ್ಟಿತು. "ಅಯ್ಯಯ್ಯೋ ನನ್ನ ಮಗು ಹೊರಟೋಯ್ತು!" ಎಂದು ಆಕೆ ಗೋಳಿಟ್ಟಳು. ಅವಳ ದುಃಖದ ಪ್ರಾಮಾಣಿಕತೆ ಕಂಡು ಸಮುದ್ರದೇವತೆ ಮಗುವನ್ನು ಜೀವಂತವಾಗಿ ದಡಕ್ಕೆ ಮರಳಿಸಿತು. ಆಕೆಗೆ ಆದ ಸಂತೋಷ ಅಷ್ಟಿಷ್ಟಲ್ಲ. ಮಗುವನ್ನೆತ್ತಿಕೊಂಡು ಲೊಚಲೊಚನೆ ಮುತ್ತಿಕ್ಕಿ ಗಾಢವಾಗಿ ತಬ್ಬಿಕೊಂಡಳು.

ಕೆಲವು ಕ್ಷಣಗಳ ನಂತರ ಅವಳ ಗಮನ ಮಗುವಿನ ಕಾಲಿನತ್ತ ಹೋಯಿತು. ಮಗುವಿನ ಒಂದು ಕಾಲಿನಲ್ಲಿ ಮಾತ್ರ ಚಪ್ಪಲಿ ಇತ್ತು. ಇನ್ನೊಂದು ಕಾಲಲ್ಲಿನ ಚಪ್ಪಲಿ ನೀರು ಪಾಲಾಗಿತ್ತು. ಕೂಡಲೇ ಆಕೆ "ಅಯ್ಯಯ್ಯೋ, ಚಪ್ಪಲಿ ಕಳೆದು ಹೋಗಿದ್ಯಲ್ಲ!" ಎಂದು ಕಿರುಚತೊಡಗಿದಳು.





**ಹೌದೇನೆ?**

❑ ಗಾನಾ ಜೋಯ್ಸ್

# 'ಚಾಂದ್ ಆಹೇ ಭರೇಗಾ' ಅಂದವನ ಚಾಕ್‌ಲೇಟು...

**ಚಾಂ**ದ್ ಆಹೇ ಭರೇಗಾ
ಫೂಲ್ ದಿಲ್ ಥಾಮ್ ಲೇಂಗೇ
ಹುಸ್ಕ್ ತೀ ಬಾತ್ ಚಲೀತೋ
ಸಬ್ ತೇರಾ ನಾಮ್ ಲೇಂಗೇ...

ಅಂತ ಬೇಂದ್ರೆ ಪುಸ್ತಕದ ಮೊದಲ ಪುಟದಲ್ಲಿ ಬರೆದು ಕಾಣದ ಹಾಗೆ ಪಿನ್ ಮಾಡಿ ಕೊಟ್ಟಿದ್ದ ಹುಡುಗನನ್ನು ನೂರು ಹುಣ್ಣಿಮೆ ಕಳೆದರೂ ಮರೆಯಲಾಗಿಲ್ಲ. ಅವನ ಹೆಸರೇ ಕತ್ತಲೆ ಕಳೆಯುವುದಾಗಿತ್ತು. ನಾನು ಬೆಳಕು ಬೇಡವೆಂದುಬಿಟ್ಟಿದ್ದೆ. ಅದ್ಯಾಕೆ ಅಂತ ಈಗಲೂ ನಂಗೊತ್ತಿಲ್ಲ! ಅವನು ನನ್ನಲ್ಲಿ ಪ್ರೀತಿ ಬೆಳೆಸಲೇ ಇಲ್ಲ. ತಾನು ಮಾತ್ರ ಅಷ್ಟುದ್ದಾ ಬೆಳೆದು ಮೇಲ್ಪತ್ತಿ ಕುಂತುಬಿಟ್ಟಿದ್ದ! ಹಾಗಂತ ಅವನ ಬಗ್ಗೆ ಈಗಲೂ ನನಗೆ ಅನುಕಂಪವಿಲ್ಲ. ಆದರೂ ಸುಮ್ಮ ಸುಮ್ಮನೇ ನೆನಪಾಗಿಬಿಡ್ತಾನೆ. ಮದುವೆಯಾದವ ನನ್ನ ಮೇಕಪ್ಪು-ಗೆಟಪ್ಪು ನೋಡಿಯೂ ಕಾಮೆಂಟು ಮಾಡದಿದ್ದಾಗ, ನನ್ನ ಅದ್ಯಾವುದ್ಯಾವುದೋ ಭಾವಗಳಿಗೆ, ಭಾಷೆಗಳಿಗೆ, ಅತಿರೇಕಗಳಿಗೆ, ಕೊರಡಾಗಿ ನಿಂತಾಗ, ಮುಖೇಶನ ಹಾಡುಗಳನ್ನ ರೋತೆರಾಗ ಅಂದುಬಿಟ್ಟಾಗ... ಆಗೆಲ್ಲಾ ಅವನು ನೆನಪಾಗುತ್ತಾನೆ ಅವನ ಸಾಲುಗಳ ನೆನಪಾಗುತ್ತದೆ. ಪ್ರೀತಿ ಅನ್ನೋದರ ಪರಿಚಯವೇ ಇರದ ಉಮರಿನಲ್ಲೇ ಅವನೂಪ್ಪಿಸುತ್ತಿದ್ದ 'ದಿನಕ್ಕೊಂದು ಲ್ಯಾಕ್ಟೋಕಿಂಗ್' ಚಾಕ್‌ಲೇಟು ನೆನಪಾಗುತ್ತೆ. ಅದ್ಯಾರದ್ದೋ ನೋಟು ತುಂಬಿದ್ದ ಪರ್ಸು ಅವನಿಗೆ ಸಿಕ್ಕು, ಅದನ್ನು ವಾಪಸು ತಲುಪಿಸಿದ್ದಕ್ಕೆ ಪಡೆದ ಬಹುಮಾನವನ್ನ ನನ್ನದೇ ಸೊತ್ತು ಅನ್ನೋ ಹಾಗೆ ನಾನು ಅವುಚಿ ಹಿಡಿದದ್ದೂ ನೆನಪಾಗುತ್ತೆ. ಯೂನಿಫಾರಮ್ಮಿನ ಆ ದಿನಗಳಲ್ಲಿನ ಭಾವನೆಯ ರೂಪಕ್ಕೆ, ಅದಕ್ಕೆ ಕೊಡಬಹುದಾದ ಹೆಸರಿಗೆ-ಇನ್ನೂ ತಡಕಾಡುತ್ತಿದ್ದೇನೆ ನಾನು.

ಅವನಿವನು ಕೊಟ್ಟ ಕಾರ್ಡು ಇಸಕೊಳ್ಳುವಾಗ ನಾನು ಅವನ ಹುಡುಕಿದ್ದು, ಅವನು ಚೆಂದವೆಂದ ಡ್ರೆಸ್ಸು ಮತ್ತೆ ಮತ್ತೆ ಹಾಕಿದ್ದು, ನವೆಂಬರ್ 28ರ ಅವನ ಬರ್ತ್‌ಡೇಟು, ಅವನು ಹೇಳಬಹುದಾಗಿದ್ದ 'ಐ ಲವ್ ಯೂ'ಗಾಗಿ ಕಡೇ ಗಳಿಗೆವರೆಗೂ ಕಾದಿದ್ದು... ಉಹೂಂ! ಅವನಿಗೆ ಗೊತ್ತಿಲ್ಲ. ಬೈಂಡಿನಲ್ಲಿ ತಾರೀಕಿನ ಸಾಲುಗಳ ಬರೆದಿಟ್ಟ ಆ ಹುಡುಗ, ನನ್ನ ಜೀವನ ಪುಸ್ತಕದಲ್ಲೂ ಬೈಂಡಾಗೇ ಹೊರಗುಳಿದುಬಿಟ್ಟ. ಒಮ್ಮೆಯೂ ಎದುರು ನಿಂತು 'ಐ ಲವ್ ಯೂ' ಅನ್ನದವನ ಜುಲುಮೆಗೆ ನನ್ನ ಮಾಫಿಯಂತೂ ಇಲ್ಲ. ಚಾಂದ್ ಆಹೇ ಭರೇಗಾ ಅಂತ ಒಳಗೊಳಗೇ ಹಾಡಿದವನು ಕೊಡುತ್ತಿದ್ದ ಲ್ಯಾಕ್ಟೋಕಿಂಗ್ ಚಾಕ್‌ಲೇಟು ಈಗ ಅದೇ ಟೇಸ್ಟಿನಲ್ಲಿ ಸಿಗುತ್ತಿಲ್ಲ. ಅವನ ಮನಸ್ಸಲ್ಲೂ ಈಗ ನನ್ನ ಬಗ್ಗೆ ಆ ಮಟ್ಟದ ಉತ್ಕಟತೆ ಖಂಡಿತಾ ಉಳಿದಿಲ್ಲ. ಆದರೂ... ಅವನೀಗಲೂ ಕಂಡಾಗಲೆಲ್ಲಾ ಕಣ್ ತಪ್ಪಿಸುತ್ತಾನೆ. ನಕ್ಕೂ ನಗು ನುಂಗುತ್ತಾನೆ. ನಾನು ಮಾತ್ರ ಕನ್ನಡಿಯೆದುರು ನಿಂತು 'ಜಿಸ್ ಜಗಹ್ ತೂ ನಹೀಂ ಹೈ, ಉಸ್ ಜಗಹ್ ಹೈ ಅಂಧೇರಾ' ಅಂತ ಗುನುಗುತ್ತಾ, ಅವನಿಂದ ಕಸ್ಕೊಂಡಿದ್ದ ಹನ್ನೆರಡು ವರ್ಷ ಹಳೆಯ ಶಾರ್ಪನರ್‌ನಿಂದ ನೆನಪುಗಳನ್ನು ಶಾರ್ಪ್ ಮಾಡ್ತಲೇ ಇರುತ್ತೇನೆ. ಅವು ನನ್ನನ್ನೇ ಚುಚ್ಚಿದರೂ!! ●



ಅತಿಥಿ



ಮುಲ್ಲಾನಾಸಿರುದ್ದೀನ್
ಕಥೆಗಳು

# ಚಂದಮಾಮದಿಂದ ಎಸೆಮೆಸ್ ವರೆಗೂ

❑ ಆಯ್ಕೆ, ಅನುವಾದ : ಜಯಸರಿತಾ

ಈ ಬಾರಿಯ ಅತಿಥಿ ಮುಲ್ಲಾನಾಸಿರುದ್ದೀನ್. ಸ್ವಲ್ಪ ಅಸಹಜ ಎನ್ನಿಸುವಂಥ ಆಯ್ಕೆ ಇದು. ಮುಲ್ಲಾನಾಸಿರುದ್ದೀನ್ ಲೇಖಕನೇ ಎಂಬ ಪ್ರಶ್ನೆ ಮೊದಲಿಗೆ ಕಾಡಿತು. ಮುಲ್ಲಾ ಕೇವಲ ಪಾತ್ರ. ಹಾಗಿರುವಾಗ ಆತನನ್ನು ಅತಿಥಿಯಾಗಿಸುವುದು ಹೇಗೆ ಎಂಬ ಪ್ರಶ್ನೆ ಅದರ ಹಿಂದೆಯೇ ಹುಟ್ಟಿಕೊಂಡಿತು. ಈ ಪ್ರಶ್ನೆಗಳಿಗೆಲ್ಲಾ ತರ್ಕಬದ್ಧ ಉತ್ತರವೊಂದನ್ನು ಕಂಡುಕೊಳ್ಳಲು ಹೊರಡುವ ಪ್ರಯತ್ನವನ್ನು ಬಿಟ್ಟು ತಣ್ಣಗೆ ಪರಿಚಯಿಸುವ ಕೆಲಸವನ್ನು ಆರಿಸಿಕೊಳ್ಳಲು ತೀರ್ಮಾನಿಸಬೇಕಾಯಿತು. ಯಾಕೆ ಈ ನಿರ್ಧಾರ ಎಂಬ ಪ್ರಶ್ನೆಗೆ ಉತ್ತರವನ್ನು ಮುಲ್ಲಾನಿಗಷ್ಟೇ ನೀಡಲು ಸಾಧ್ಯ.

ಮುಲ್ಲಾನಾಸಿರುದ್ದೀನ್ ಒಬ್ಬ ಸೂಫಿ ಸಂತ ಎನ್ನುವುದನ್ನು ಹೊರತುಪಡಿಸಿದರೆ ಆತ ಯಾರು ಎನ್ನುವುದು ಯಾರಿಗೂ ಗೊತ್ತಿಲ್ಲ ಎನ್ನುವ ಅಭಿಪ್ರಾಯ ಸೂಫಿಗಳ ಕುರಿತು ಬಹಳಷ್ಟು ಸಂಶೋಧನೆಗಳನ್ನು ನಡೆಸಿದ ಇದ್ರಿಸ್ ಶಾನದ್ದು. ಈತ ಸೂಫಿ ಸಂತರ ದರ್ವೇಶ್ ಪಂಥದ ಅನುಭಾವಿಗಳ ಸೃಷ್ಟಿ ಎಂಬ ಮತ್ತೊಂದು ವಾದವೂ ಇದೆ. ಮುಲ್ಲಾ ಇದ್ದನೇ ಇಲ್ಲವೇ ಎಂಬುದನ್ನು ಹೀಗೆ ವಾದಗಳನ್ನಿಟ್ಟುಕೊಂಡು ನಿರ್ಧರಿಸಲು ಸಾಧ್ಯವೇ ಇಲ್ಲ. ಏಕೆಂದರೆ ಸೂಫಿ ಸಂತರಿಗೆ ಮುಖ್ಯವಾಗುವುದು ಸಂದೇಶವೇ ಹೊರತು ಸಂದೇಶ ನೀಡುವವನಲ್ಲ. ಮುಲ್ಲಾ ಇದ್ದಿದ್ದರೂ ತನ್ನ ಬಗ್ಗೆ ಹೆಚ್ಚೇನೂ ಹೇಳಿಕೊಂಡಿರಲಾರ. ಇಂಥ ಅನೇಕ ಸಮಸ್ಯೆಗಳಿದ್ದರೂ ಮುಲ್ಲಾನಾಸಿರುದ್ದೀನ್‌ಗೂ ಒಂದು ಇತಿಹಾಸವಿದೆ. ಮುಲ್ಲಾ 'ವಿದ್ವಾಂಸ'ರನ್ನು ತಮಾಷೆ ಮಾಡಲು ಬಳಸುವ ಪರಿಕರಗಳನ್ನು ಬಳಸಿಕೊಂಡು ಆತನ ಇತಿಹಾಸ ಕಂಡುಕೊಳ್ಳಲು 'ಇತಿಹಾಸದ ವಿದ್ವಾಂಸರು' ಪ್ರಯತ್ನಿಸಿದ್ದಾರೆ. ಈ ಪ್ರಯತ್ನಗಳ ಪರಿಣಾಮವಾಗಿ ಮುಲ್ಲಾನ ಕಾಲ, ಆತನಿಗೊಂದು ಸಮಾಧಿ ಮುಂತಾದುವುಗಳೆಲ್ಲಾ ಸೃಷ್ಟಿಯಾಗಿವೆ. ಈ ಪ್ರಯತ್ನ ಮುಲ್ಲಾನಿಗೇ ಹೃದಯ ತುಂಬಿ ಬರಲು ಕಾರಣವಾಗಿತ್ತಂತೆ. ಒಬ್ಬರು ವಿದ್ವಾಂಸರ ಪ್ರಕಾರ ಮುಲ್ಲಾನದ್ದು ಉಲ್ಟಾ ಜಗತ್ತು. ಹಾಗಾಗಿ ಮುಲ್ಲಾನ ಸಮಾಧಿ ಕಲ್ಲಿನ ಮೇಲಿರುವ ಬರಹದಲ್ಲಿ 386 ಎಂದು ಬರೆದಿರುವುದನ್ನು 683 ಎಂದು ಓದಬೇಕು. ಮತ್ತೊಬ್ಬರು ವಿದ್ವಾಂಸರು ಈ ಸಂಖ್ಯೆಯನ್ನೇ ಇಟ್ಟುಕೊಂಡು ಮತ್ತೊಂದು ವಾದ ಮಂಡಿಸಿದ್ದಾರೆ. ಈ ಸಂಖ್ಯೆ ಅರಾಬಿಕ್‌ನಲ್ಲಿ ಬರೆದದ್ದಾಗಿದ್ದರೆ ಅವುಗಳನ್ನು ತಿರುಗು ಮುರುಗಾಗಿಸಿದಾಗ 274 ಆಗುತ್ತದಂತೆ. ಈ ವಾದಗಳನ್ನು ಕೇಳಿ ಬೇಸತ್ತ ದರ್ವೇಶ್ ಪಂಥದ ಸಂತನೊಬ್ಬ 'ಒಂದು ಜೇಡವನ್ನು ಶಾಯಿಯಲ್ಲಿ ಮುಳುಗಿಸಿ ಕಾಗದದ ಮೇಲೆ ಬಿಟ್ಟರೆ ಸರಿಯಾದ ದಿನಾಂಕವನ್ನು ಬರೆಯಬಹುದು ಅಥವಾ ಸರಿಯಾದ ಏನನ್ನಾದರೂ ತೋರಿಸಬಹುದು ಎಂದಿದ್ದ.

ಈ ಎಲ್ಲಾ ವಾದಗಳನ್ನು ಬಿಟ್ಟು ನೋಡಿದರೂ ಮುಲ್ಲಾ ಒಬ್ಬ ಬರಹಗಾರ ಎಂಬ ತೀರ್ಮಾನಕ್ಕೆ ನಾವಂತೂ ಬರಬಹುದು. ಏಕೆಂದರೆ ಮುಲ್ಲಾನ ಕಥೆಗಳು ನಮ್ಮೆದುರು ಇವೆ. ಮುಲ್ಲಾನ ಕಥೆಗಳನ್ನು ನಾವು ಚಂದಮಾಮದಿಂದ ಆರಂಭಿಸಿ ಎಸ್‌ಎಂಎಸ್ ಜೋಕ್‌ಗಳವರೆಗೆ ಎಲ್ಲೆಲ್ಲಾ ಓದಿದ್ದರೂ ಅವುಗಳ ಲೇಖಕ ಇಂಥವನೆಂದು ನಮಗೆ ತಿಳಿದಿದೆಯೇ? ಇಲ್ಲ. ಹಾಗಿರುವುದರಿಂದ ಇವುಗಳ ಲೇಖಕ ಮುಲ್ಲಾನೇ ಸರಿ!

ಮುಲ್ಲಾನಾಸಿರುದ್ದೀನ್ ಕೇವಲ ಸರ್ದಾರ್ಜಿಯಂತೆ ನಗೆಹನಿಯ ಪಾತ್ರವಲ್ಲ. ಮುಲ್ಲಾ ಕಥೆಗಳನ್ನು ಕೇವಲ ನಗೆಹನಿಯಾಗಿ ಓದಬಹುದಾದರೂ ಅವುಗಳು ಆಧ್ಯಾತ್ಮಿಕ ಅರ್ಥಗಳನ್ನೂ ಹೊಂದಿವೆ. ಒಂದು ಕಥೆಯನ್ನು ಅಧ್ಯಾತ್ಮದ ಪರಿಧಿಯಲ್ಲಿ ಚರ್ಚಿಸಲು ಪ್ರಯತ್ನಿಸೋಣ.

ಮುಲ್ಲಾ ಕತ್ತೆಗೆ ಬುದ್ಧಿ ಕಲಿಸಿದ ಈ ಕಥೆ ಹೆಚ್ಚಿನವರಿಗೆ ಗೊತ್ತಿದೆ. ಮುಲ್ಲಾ ಕತ್ತೆಯ ಮೇಲೆ ಉಪ್ಪು ಹೇರಿಕೊಂಡು ಸಂತೆಗೆ ಹೊರಟ. ದಾರಿಯಲ್ಲೊಂದು ಹೊಳೆ ಸಿಕ್ಕಿತು. ಉಪ್ಪು ನೀರಿನಲ್ಲಿ ನೆನೆಯುವಂತೆ ನದಿ ದಾಟಿತು. ನದಿಯಿಂದ ಮೇಲೇರುವಷ್ಟರಲ್ಲಿ ಉಪ್ಪಿನಲ್ಲಿ ಬಹಳಷ್ಟು ಭಾಗ ಕರಗಿ ಹೋಗಿ ಅದರ ಹೊರೆ ಕಡಿಮೆಯಾಯಿತು. ಕತ್ತೆ ಹೊಸ ತೊಂದು ವಿದ್ಯೆ ಕಲಿತೆ ಎಂದು ಸಂತೋಷಿಸಿತು. ಆದರೆ ಉಪ್ಪು ಕರಗಿ ಹೋದದ್ದರಿಂದ ಮುಲ್ಲಾನಿಗೆ ಕೋಪ ಬಂತು.

ಮರುದಿನ ಮುಲ್ಲಾ ಕತ್ತೆಯ ಮೇಲೆ ಉಣ್ಣೆಯನ್ನು ಹೇರಿದ. ಕತ್ತೆ ಹಿಂದಿನಂತೆಯೇ ನದಿ ದಾಟುವಾಗ ಉಣ್ಣೆಯನ್ನೂ ನೀರಿನಲ್ಲಿ ಮುಳುಗಿಸಿತು. ಈ ಬಾರಿ ಹೊರೆ ಇಳಿಯುವುದರ ಬದಲಿಗೆ ಹೆಚ್ಚಿತು. ನದಿ ದಾಟ ಬಹಳ ಕಷ್ಟದಿಂದ ಮಾರುಕಟ್ಟೆಯವರೆಗೆ ಸಾಗಿತು.

ಈ ಕಥೆಯಲ್ಲಿ ಎರಡು ಸೂಫೀ ಪಾರಿಭಾಷಿಕಗಳಿವೆ. ಒಂದು 'ಉಪ್ಪು' ಮತ್ತೊಂದು 'ಉಣ್ಣೆ'. ಉಪ್ಪನ್ನು ಸೂಫಿ ಪರಿಭಾಷೆಯಲ್ಲಿ ಒಳ್ಳೆಯತನದ ರೂಪಕವಾಗಿ ಬಳಸಲಾಗುತ್ತದೆ. ಕತ್ತೆ ಇಲ್ಲಿ ಮನುಷ್ಯನ ರೂಪಕ. ಮನುಷ್ಯ ಈ ಒಳ್ಳೆಯತನದ ಹೊರೆಯನ್ನು ಸದಾ ಹೊತ್ತು ಸಾಗುತ್ತಿರುತ್ತಾನೆ. ಒಳ್ಳೆಯತನದ ಹೊರೆಯನ್ನು ಕಳಚಿಕೊಂಡಾಗ ಆತನಿಗೆ ಯಾವುದೋ ಬಿಡುಗಡೆ ಸಿಕ್ಕ ಸಂತೋಷವಾಗುತ್ತದೆ. ಆದರೆ ಇದರ ಪರಿಣಾಮವಾಗಿ ಆತ ತನ್ನ ಆಹಾರವನ್ನೇ ಕಳೆದುಕೊಳ್ಳುತ್ತಾನೆ. ಅಂದರೆ ಉಪ್ಪನ್ನು ಮಾರಿ ಮುಲ್ಲಾ ಕತ್ತೆಗೆ ಬೇಕಾದ ಹುಲ್ಲು ಖರೀದಿಸಬೇಕಿತ್ತು. 'ಉಣ್ಣೆ' ಸೂಫಿಗಳ ಹೆಸರಿನೊಂದಿಗೇ ಸಂಬಂಧ ಇಟ್ಟುಕೊಂಡಿರುವ ಪದ. ಒಂದು ರೀತಿಯಲ್ಲಿ ಇದು ಸೂಫಿ ಎಂಬುದಕ್ಕೆ ಸಮಾನಾರ್ಥಕ. ಮರುದಿನದ ಪ್ರಯಾಣದಲ್ಲಿ ಕತ್ತೆ ಉಣ್ಣೆಯನ್ನು ನೀರಿನಲ್ಲಿ ಮುಳುಗಿಸಿ ತನ್ನ ಮೇಲಿನ ಹೊರೆಯನ್ನು ಹೆಚ್ಚಿಸಿಕೊಂಡಿತು. ಒಳ್ಳೆಯತನ ಎಂಬ ಹೊರೆ ತನಗೆ ಆಹಾರವನ್ನು ಒದಗಿಸುತ್ತದೆ ಎಂದು ಅರಿವಾದ ಮನುಷ್ಯ ಅದನ್ನು ಮತ್ತೆ ಗಳಿಸಿಕೊಳ್ಳಲು ಗುರುವಿನ ಮೊರೆ ಹೋಗುತ್ತಾನೆ. ಅಂದರೆ ತನ್ನ ಹೊರೆಯನ್ನು ಹೆಚ್ಚಿಸಿ ಕೊಳ್ಳುತ್ತಾನೆ. ಈ ಹೆಚ್ಚುವರಿ ಹೊರೆ ಹೊತ್ತ ಕತ್ತೆ ಕಷ್ಟಪಟ್ಟು ಮಾರುಕಟ್ಟೆ ತಲುಪುತ್ತದೆ. ಆದರೆ ಅಂತ್ಯ ಇಲ್ಲಿ ಸುಖದ್ದು. ಏಕೆಂದರೆ ಅದಕ್ಕೆ ಬೇಕಿರುವ ಆಹಾರ ದೊರೆಯುತ್ತದೆ. ಮನುಷ್ಯನೂ ಹಾಗೆಯೇ. ಗುರುವಿನ ಹೊರೆ ಯನ್ನು ಹೊತ್ತು ಸಾಗುವುದು ಕಷ್ಟವಾದರೂ ಅದು ಅವನಿಗೆ ಒಳಿತನ್ನೇ ನೀಡುತ್ತದೆ. ನೀರಿನಲ್ಲಿ ಒದ್ದೆಯಾಗುವ ಉಣ್ಣೆ ಎಂಬುದು ಭಾರ ಹೆಚ್ಚಿಸಿಕೊಂಡದ್ದರಿಂದ ಹೆಚ್ಚು ಹಣವನ್ನೂ ಗಳಿಸಿಕೊಟ್ಟಿತು ಎಂಬ ಅಂಶವನ್ನು ಗಮನಿಸಬೇಕು.

ಇದು ಮುಲ್ಲಾನ ಕಥೆಗಳ ಸೂಫೀ ಓದು. ಆತನ ಎಲ್ಲಾ ಕಥೆಗಳಲ್ಲೂ ಹೀಗೊಂದಷ್ಟು ಗೂಢಾರ್ಥಗಳಿರುತ್ತವೆ. ಅಷ್ಟೇನೂ ಪ್ರಸಿದ್ಧವಲ್ಲದ ಕೆಲವು ಕಥೆಗಳು ಇಲ್ಲಿವೆ. ಓದಿ, ಹಾಗೆಯೇ ಧ್ಯಾನಿಸಿ, ಹೊಸ ಅರ್ಥಗಳು ಹೊಳೆದರೆ ನಮಗೂ ಬರೆದು ತಿಳಿಸಿ.

●

ಮುಲ್ಲಾ ತನ್ನ ಗೆಳೆಯ ವಿದ್ವಾಂಸರ ಜತೆ ಚರ್ಚಿಸುತ್ತಿದ್ದ. ಒಬ್ಬಾತ ಮುಲ್ಲಾನಿಗೊಂದು ಪ್ರಶ್ನೆ ಎಸೆದ.

'ಪ್ರಾಪಂಚಿಕ ವಸ್ತುಗಳು ಮತ್ತು ಪರಲೋಕದ ವಸ್ತುಗಳ ನಡುವಣ ಸಂಬಂಧ ವಿವರಿಸುತ್ತೀಯಾ?'

'ಸರಿ, ನೀನು ರೂಪಕಗಳನ್ನು ಅರ್ಥ ಮಾಡಿಕೊಳ್ಳಬೇಕು'

'ನಿನ್ನ ಒಗಟು ಬೇಡ-ಪ್ರಾಯೋಗಿಕವಾದ ಏನನ್ನಾದರೂ ತೋರಿಸು. ಉದಾಹರಣೆಗೆ ಸ್ವರ್ಗದ ಸೇಬು'

ಮುಲ್ಲಾ ಅಲ್ಲೇ ಇದ್ದ ಹಣ್ಣುಗಳ ರಾಶಿಯಿಂದ ಒಂದು ಸೇಬನ್ನು ತೆಗೆದು ಪ್ರಶ್ನೆ ಕೇಳಿದಾತನಿಗೆ ಕೊಟ್ಟ. ಇದನ್ನು ತೆಗೆದುಕೊಂಡ ಪ್ರಶ್ನಿಸಿದಾತ 'ಇದು ಒಂದು ಕಡೆ ಕೆಟ್ಟಿದೆ. ಸ್ವರ್ಗದ ಸೇಬು ಪರಿಪೂರ್ಣವಾಗಿರಲೇಬೇಕು' ಎಂದ.

ಮುಲ್ಲಾನ ಉತ್ತರ ಬಂತು: 'ಸ್ವರ್ಗದ ಸೇಬು ಪರಿಪೂರ್ಣವೇ. ಈ ಭ್ರಷ್ಟ ಜಗತ್ತಿನಲ್ಲಿ, ಭ್ರಷ್ಟವಾಗಿ ಹೋಗಿರುವ

ಪ್ರಜ್ಞೆಯನ್ನು ಉಳಿಸಿಕೊಂಡು ಸ್ವರ್ಗದ ಸೇಬು ಹೇಗಿರಬೇಕು ಎಂದು ನೀನು ತೀರ್ಮಾನಿಸಬಹುದಾದರೆ ಇದು ನಿನಗೆ ಸಿಗಬಹುದಾದ ಅತ್ಯುತ್ತಮ ಸ್ವರ್ಗದ ಸೇಬು'.

★

ಮುಲ್ಲಾನಾಸಿರುದ್ದೀನ್ ಖಾಝಿಯಾಗಿದ್ದ ದಿನಗಳವು. ಇಬ್ಬರು ವ್ಯಾಜ್ಯವೊಂದನ್ನು ತಂದರು. ವಾದಿ ಆರೋಪಿಸಿದ 'ಆತ ನನ್ನ ಕಿವಿಯನ್ನು ಕಚ್ಚಿ ಹರಿದ.'

ಪ್ರತಿವಾದಿ ಹೇಳಿದ 'ನಾನು ಕಚ್ಚಲೂ ಇಲ್ಲ, ಹರಿಯಲೂ ಇಲ್ಲ. ಆತನೇ ಕಿವಿ ಕಚ್ಚಿ ಹರಿದುಕೊಂಡಿದ್ದಾನೆ.'

ನಾಸಿರುದ್ದೀನ್ ಅಂದು ವಿಚಾರಣೆಯನ್ನು ಅಲ್ಲಿಗೇ ಮುಗಿಸಿ. ಅವರನ್ನು ಮರುದಿನ ಹಾಜರಾಗಲು ತಿಳಿಸಿದ. ಮನೆಗೆ ಹೋದ ನಾಸಿರುದ್ದೀನ್ ತನ್ನ ಕಿವಿಯನ್ನು ತಾನೇ ಕಚ್ಚಲು ಪ್ರಯತ್ನಿಸಿ ಸೋತ. ಇದರ ಪರಿಣಾಮವಾಗಿ ಹಣೆಯಲ್ಲಿ ಗಾಯವಾಯಿತು.

ಮರುದಿನ ವಿಚಾರಣೆ ಆರಂಭಗೊಂಡಿತು. ವಾದಗಳನ್ನು ಆಲಿಸಿದ ಭಟರಿಗೆ ಆದೇಶಿಸಿದ. 'ಕಿವಿ ಹರಿದುಕೊಂಡವನನ್ನು ಪರೀಕ್ಷಿಸಿ. ಅವನ ಹಣೆಯಲ್ಲಿ ಗಾಯವಾಗಿದ್ದರೆ ಅವನ ಕಿವಿಯನ್ನು ಅವನೇ ಕಚ್ಚಿಕೊಂಡಿದ್ದಾನೆ. ಇಲ್ಲದಿದ್ದರೆ ಮತ್ತೊಬ್ಬ ಕಚ್ಚಿದ್ದಾನೆ. ಆತ ಕಚ್ಚಿಸಿಕೊಂಡವನಿಗೆ ಮೂರು ಬೆಳ್ಳಿ ನಾಣ್ಯಗಳ ಪರಿಹಾರವನ್ನು ನೀಡಲಿ'.

★

ಒಬ್ಬಾತ ಮುಲ್ಲಾನಿಗೆ ಒಂದು ಸವಾಲೊಡ್ಡಿದ: 'ನನ್ನ ಮುಷ್ಟಿಯಲ್ಲಿ ಇರುವುದು ಏನು ಎಂದು ಹೇಳಲು ಸಾಧ್ಯವೇ'

'ಒಂದು ಸುಳಿವು ಕೊಡು'

'ಒಂದೇಕೆ ನೂರು ಕೊಡುವೆ'

'ಸರಿ'

'ಅದು ಗುಂಡಗಿದೆ, ಬಿಳಿಯಾಗಿದೆ, ಹೊರ ಕವಚ ಗಟ್ಟಿಯಾಗಿದೆ, ಒಳಗೆ ಬಿಳಿಯಾದ ದ್ರವದೊಳಗೆ ತೇಲುವ ಹಳದಿ ವಸ್ತುವಿದೆ, ಇದು ಬೇಯಿಸುವ ಮೊದಲು ದ್ರವವಾಗಿದ್ದು ಬೇಯಿಸಿದ ನಂತರ ಗಟ್ಟಿಯಾಗುತ್ತದೆ...ಇದನ್ನು ಹೇಂಟೆ...'

ಇಷ್ಟಾಗುವಾಗ ಮುಲ್ಲಾ 'ನಿಲ್ಲಿಸು ಅದೇನೆಂದು ಗೊತ್ತಾಯಿತು' ಎನ್ನುತ್ತಾನೆ.

ಸವಾಲೊಡ್ಡಿದವನು ಉತ್ತರ ಆಲಿಸಲು ಸಿದ್ಧತೆ ನಡೆಸುವಾಗಲೇ ಮುಲ್ಲಾನ ಉತ್ತರ ಸಿಡಿಯಿತು:

'ಅದು ಕೇಕ್ ಆಗಿರಬಹುದು!'.

★

ಮುಲ್ಲಾನನ್ನು ಆತನ ಶಿಷ್ಯನೊಬ್ಬ ತನ್ನ ಊರಿಗೆ ಕರೆದೊಯ್ದ. ಸಂಜೆ ಊರು ನೋಡಲು ಗುರುವನ್ನು ಕರೆದೊಯ್ದು ಆತ ಸುತ್ತಮುತ್ತೆಲ್ಲಾ ಪ್ರಸಿದ್ಧವಾಗಿದ್ದ ಆ ಊರಿನ ಬೆಟ್ಟದ ತಪ್ಪಲಲ್ಲಿ ಸರೋವರ ಇರುವ ಸುಂದರ ದೃಶ್ಯವನ್ನು ತೋರಿಸಿದ.

'ಎಷ್ಟು ಸುಂದರ' ಎಂದು ಉದ್ಗರಿಸಿದ ಶಿಷ್ಯ.

'ಎಷ್ಟು ಸುಂದರ, ಆದರೆ...' ಎಂದು ರಾಗವೆಳೆದ ಮುಲ್ಲಾ

'ಯಾಕೆ' ಶಿಷ್ಯನ ಪ್ರಶ್ನೆ.

'ಏನಿಲ್ಲ, ಅದರೊಳಗೆ ನೀರು ತುಂಬಿಸದೇ ಇದ್ದಿದ್ದರೆ ನಿಜಕ್ಕೂ ಸುಂದರ...' ಎಂದ ಮುಲ್ಲಾ.

★

ಒಂದು ದಿನ ಮುಲ್ಲಾ ಹೆಂಡತಿಯನ್ನು ಕರೆದು ಹಲ್ವಾ ತಯಾರಿಸಲು ಹೇಳಿದ. ಅದಕ್ಕೆ ಬೇಕಾದ ಎಲ್ಲಾ ಸಾಮಾನನ್ನೂ ತಂದುಕೊಟ್ಟ. ಆಕೆ ಹಲ್ವಾ ತಯಾರಿಸಿದಳು. ಅದರಲ್ಲಿ ಬಹುಪಾಲನ್ನು ಮುಲ್ಲಾ ತಿಂದು ಮಲಗಿದ.

ಮಧ್ಯರಾತ್ರಿ ಇದ್ದಕ್ಕಿದ್ದಂತೆ ಎದ್ದು ಕುಳಿತ ಮುಲ್ಲಾ ಹೆಂಡತಿಯನ್ನೂ ಎಬ್ಬಿಸಿದ. ಆಕೆ ಏನೆಂದು ಕೇಳಿದಳು.

'ಏನಿಲ್ಲ, ಒಂದು ಹೊಸ ಚಿಂತನೆ'.

'ಏನದು'

'ಹಲ್ವಾ ಉಳಿದಿದ್ದರೆ ಅದನ್ನು ತಾ, ಆಮೇಲೆ ಹೇಳುತ್ತೇನೆ' ಎಂದ ಮುಲ್ಲಾ.

ಹೆಂಡತಿ ಹಲ್ವಾ ತಂದುಕೊಟ್ಟಳು.

ಅದನ್ನು ತಿಂದು ಮುಗಿಸಿದ ಮುಲ್ಲಾ ಹೇಳಿದ 'ಅಂದು ಮಾಡಿದ ಹಲ್ವಾವನ್ನು ಅಂದೇ ತಿಂದು ಮುಗಿಸು!'

★

ಮುಲ್ಲಾ ಒಂದು ಅಂಗಡಿಗೆ ನುಗ್ಗಿದ. ಅಂಗಡಿಯಾತ ಮುಲ್ಲಾನನ್ನು ಸ್ವಾಗತಿಸಿ ವ್ಯಾಪಾರಕ್ಕೆ ಸಿದ್ಧನಾದ. ಮುಲ್ಲಾ ಹೇಳಿದ, 'ವ್ಯಾಪಾರ ಮತ್ತೆ. ಕೆಲವು ಪ್ರಶ್ನೆಗೆ ಮೊದಲು ಉತ್ತರಿಸು.'

ಅಂಗಡಿಯಾತ 'ಆಗಬಹುದು' ಎಂದ.

'ನಾನು ಅಂಗಡಿಗೆ ಬಂದದ್ದನ್ನು ನೋಡಿದೆಯಾ?'

'ಖಂಡಿತವಾಗಿಯೂ ಸ್ವಾಮಿ.'

'ಈ ಮೊದಲು ಎಂದಾದರೂ ನನ್ನನ್ನು ನೋಡಿದ್ದೀಯಾ?'

'ಖಂಡಿತವಾಗಿಯೂ ಇಲ್ಲಾ ಸ್ವಾಮಿ'

'ಹಾಗಾದರೆ ಅಂಗಡಿಗೆ ಬಂದದ್ದು 'ನಾನೇ' ಎಂದು ನಿನಗೆ ಹೇಗೆ ಗೊತ್ತಾಯಿತು?' ●

# ಮಾತಾದವೋ ಹಕ್ಕಿ ಮಳೆಯಾದವೋ



ಚೌಕಟ್ಟಿನೊಳಗೊಂದು ಚಿತ್ರ

ಆಕಾಶದಲ್ಲಿ ಮೋಡಗಳ ಮೆರವಣಿಗೆ ನಡೆದಿದೆ. ಇನ್ನು ಸ್ವಲ್ಪ ಹೊತ್ತಲ್ಲೇ ಮಳೆ ಬೀಳಬಹುದೆನ್ನಿಸುವಂತೆ ತಂಪು ಹವೆ ಬೀಸತೊಡಗಿದೆ. ಎಂಥದೋ ಒಂದು ಬಗೆಯ ಖುಷಿಯನ್ನು ಅರಳಿಸುವ ಹಾಗೆ ವಾತಾವರಣ ಕೂಡಿಬಂದಿದೆ.

ಮೋಡಗಳು ನೆರೆದ ಬಾನಲ್ಲಿ ಎರಡು ಹಕ್ಕಿಗಳು ಅದೋ ದೂರದಿಂದ ಇತ್ತ ಕಡೆಯೇ ಹಾರಿಕೊಂಡು ಬರುತ್ತಿವೆ. ಎಷ್ಟು ದೂರದಿಂದ ಬರುತ್ತಿವೆಯೋ ಅವು. ಆದರೆ ಅವುಗಳ ಹಾರುವಿಕೆಯ ಗತ್ತಿನಲ್ಲಿ ಮಾತ್ರ ಬಳಲಿಕೆಯ ಸುಳಿವು ಇಷ್ಟೇ ಇಷ್ಟೂ ಇಲ್ಲ. ಯಾವುದೇ ಧಾವಂತವೂ ಇಲ್ಲ. ಬೆಚ್ಚಗಿನ ಅಚ್ಚರಿ ಹುಟ್ಟುವಂತಹ ನಿರಾಳತೆ.

ಹಾಗೆ ಹಾರಿ ಬಂದ ಆ ಎರಡೂ ಹಕ್ಕಿಗಳು ಬಂದೂ ಬಂದೂ ಬಂದೂ ಆದೋ ಆ ಮರದ ತುತ್ತ ತುದಿಯಲ್ಲಿ ಕೂತವು. ಒಂದು ಯಾನದ ನಂತರದ ವಿರಾಮದಲ್ಲಿ ಕಣ್ಣಿಗೆ ತುಂಬುವಷ್ಟು ನಿಚ್ಚಳವಾಗಿ ಕಂಡವು. ಪರಸ್ಪರ ಮುಖ ನೋಡಿಕೊಳ್ಳುತ್ತ ಅದೇನೋ ಮಾತಿಗೆ ತೊಡಗಿದಂಥ ಬಗೆಯಲ್ಲಿ ಬೆಳೆದವು. ಅದ್ಯಾವ ಮಾತೊ...



ಟಪ್ ಟಪ್ ಟಪ್ ಎಂದು ಮಳೆ ಹನಿಯಲಾರಂಭಿಸಿತು.

ಧರಣಿ ಪಾಟೀಲ್, ಗದಗ

# ಸಂಜೆ ಯಾರಿಗೋ ಕಾಯುತ್ತ...

ಸಂಜೆ ಯಾರಿಗೋ ಕಾಯುತ್ತ ಕೂತಂತಿದ್ದ ಆ ಹಣ್ಣುಹಣ್ಣು ಮುದುಕಿ ಅದೆಷ್ಟು ಹೊತ್ತಿನಿಂದ ಅಲ್ಲಿ ಕೂತೇ ಇದ್ದಾಳಲ್ಲ! ಮುಳುಗುತ್ತಿರುವ ಸೂರ್ಯನ ಕೆಂಪು ಕಿರಣಗಳು ಅವಳ ಮುಖದ ಸುಕ್ಕುಗಳಲ್ಲಿ ಸೆರೆಯಾಗಿ ಬಿಟ್ಟಂತಿದೆ. ಆ ಕೆಂಪು ಬಿಸಿಲು ಅವಳೆದುರಿನ ಬುಟ್ಟಿಯಲ್ಲಿರುವ ನೇರಳೆ ಹಣ್ಣುಗಳಿಗೆ ಇನ್ನಷ್ಟು ಬಣ್ಣವನ್ನು ಕರುಣಿಸಿದಂತಿದೆ. ಅಜ್ಜಿಯ ಸಮೀಪದಲ್ಲಿ ಮತ್ತೊಬ್ಬರೂ ಇಲ್ಲ. ಆದರೆ ಎಲ್ಲರನ್ನೂ ಕೋಯಿಸುತ್ತಿರುವ ಸಂಜೆ ಮಾತ್ರ, ಎಲ್ಲೂ ಅಜ್ಜಿ ಕಾಯುತ್ತ ಕೂತಂತೆ ಕೂತಿರುವ ದಾರಿಯ ಗುಂಟ ನಡೆದೇ ನಡೆಯಬೇಕಲ್ಲ ಎಂಬ ಗುಟ್ಟು ಬಲ್ಲೆನೆಂಬಂತೆ ನಗೆ ಸೂಸುತ್ತಿರುವಂತಿದೆ.

ವಸಂತ ರಾಯ್ಕರ್, ಧಾರವಾಡ



ಟೂರಿಂಗ್ ಟಾಕೀಸ್



# ತಲ್ಲಣಗಳ ಎದುರಲ್ಲೂ ಜೀವನ ತನ್ಮಯತೆ

❑ ವೇದವತಿ

'ಅತ್ಯಂತ ಸಂಕಟದ ಗಳಿಗೆಗಳಲ್ಲಿ ಹಳೆಯ ಮಧುರ ಕ್ಷಣಗಳನ್ನು ನೆನಪಿಸಿಕೊಳ್ಳುವುದಿದೆಯಲ್ಲ, ಅದಕ್ಕಿಂತ ದುರಂತ ಬೇರೊಂದಿಲ್ಲ' ಎನ್ನುತ್ತಾನೆ ಡಾಂಟೆ. ಈ ಅರ್ಥದಲ್ಲಿ ನೋಡಿದರೆ ಒಂದು ದುರಂತ ಕಾವ್ಯದಂತಿರುವ, ಆದರೆ ಅತ್ಯಂತ ತೀವ್ರ ಬಗೆಯಲ್ಲಿ ಜೀವನ್ಮುಖಿ ಸಂವೇದನೆಯನ್ನು ನುಡಿಯುವ ಒಂದು ಅಪರೂಪದ ಚಿತ್ರ 'ಲೈಫ್ ಈಸ್ ಬ್ಯೂಟಿಫುಲ್'.



ತೀರಾ ವಿಷಾದಭರಿತ ಐತಿಹಾಸಿಕ ಸಂಗತಿಯೊಂದನ್ನು ತಮಾಷೆಯ ಲೇಪದೊಂದಿಗೆ-ಆದರೆ ಆ ವಿಷಾದದ ತೀವ್ರತೆ ಎಲ್ಲೂ ಗೌಣವಾಗದ ಹಾಗೆ ಈ ಚಿತ್ರದ ನಿರೂಪಣೆಯಿದೆ.

ಇಟಲಿಯ ರಾಬರ್ಟೋ ಬೆನಿಗ್ನಿ ಬರೆದು, ನಿರ್ದೇಶಿಸಿ, ಸ್ವತಃ ಪ್ರಧಾನ ಪಾತ್ರವನ್ನೂ ನಿರ್ವಹಿಸಿರುವ ಈ ಚಿತ್ರ, ಸಾಮೂಹಿಕ ಆಹುತಿಯ ನಡುವೆಯೇ ಅರಳಿಕೊಳ್ಳುವ ಒಂದು ಅತಿ ಮಧುರ ಪ್ರೇಮ ಕಥಾನಕ. ಚಿತ್ರದ ಮೊದಲರ್ಧವಂತೂ ಜ್ಯೂಡೋ(ಬೆನಿಗ್ನಿ ನಿರ್ವಹಿಸಿರುವ ಪಾತ್ರ) ಮತ್ತು ದೋರಾಳ ನಡುವಿನ ಪ್ರೇಮದ ಝಲಕುಗಳೇ. ಅಲ್ಲಿನ ಒಂದೊಂದು ಸನ್ನಿವೇಶಗಳೂ ಮನಸ್ಸನ್ನು ನಗೆಗಡಲಲ್ಲಿ ತೇಲಿಸಿ ಹಗುರಾಗಿಸುತ್ತವೆ. ಅವರಿಬ್ಬರ ನಡುವಿನ ಪ್ರೇಮ ಗಾಢವಾಗುವ ಆ ಹಂತ ನಮ್ಮೊಳಗೊಂದು ಬೆಚ್ಚಗಿನ, ಉಲ್ಲಾಸದ, ಲವಲವಿಕೆಯ

ಅನುಭವವನ್ನು ಬೆಳೆಸುತ್ತದೆ. ಹೀಗೆ ಚಿತ್ರದ ಮೊದಲರ್ಧ ಪೂರ್ತಿ ಹಾಸ್ಯವೇ ಆವರಿಸಿಕೊಂಡರೆ, ಉಳಿದರ್ಧ ಭಾಗ ಕಣ್ಣೀರಿನ ನಡುವೆಯೇ ಮುಗುಳ್ನಗುವಂತೆ ಮಾಡುವ ಚೈತನ್ಯವುಳ್ಳದ್ದು.

ಕಥೆ ನಡೆಯುವುದು ಇಟಲಿಯಲ್ಲಿ. ಅದು 1938ರ ಇಟಲಿ. ಫ್ಯಾಸಿಸಂನ ಹಿಡಿತದಲ್ಲಿ ನಲುಗುತ್ತಿರುವ ಇಟಲಿ. ಸುಮಾರು ಎಂಟು ಸಾವಿರದಷ್ಟು ಮಂದಿ ಇಟಲಿಯ ಯಹೂದಿಗಳು ಲಾಗಾಯ್ತಿನಿಂದ ತಮ್ಮದಾಗಿದ್ದ ಮನೆಗಳಿಂದ ಭ್ರಷ್ಟರಾಗಿ ಜರ್ಮನಿಯ ಮೃತ್ಯುಶಿಬಿರಕ್ಕೆ ಕಳಿಸಲ್ಪಟ್ಟಿರುತ್ತಾರೆ. ಇಂಥದೊಂದು ಅಮಾನವೀಯ ಬ್ಯಾಕ್‌ಡ್ರಾಪ್‌ಗೆ ತದ್ವಿರುದ್ಧವಾಗಿ ಬೆನಿಗ್ನಿ, ಜ್ಯೂಡೋ ಮತ್ತು ದೋರಾ ಪ್ರೇಮ ಕಥೆಯನ್ನು ಬಿಡಿಸಿಡುತ್ತಾನೆ.

ಹಳ್ಳಿಯಿಂದ ಬಂದವನಾದ ಜ್ಯೂಡೋ ತನ್ನ ಪೆದ್ದುತನದಿಂದಲೇ ಮನಗೆಲ್ಲುವವನಾಗಿದ್ದಾನೆ. ಪುಸ್ತಕದಂಗಡಿ ತೆರೆಯಬೇಕೆಂಬ ಕನಸಿಟ್ಟುಕೊಂಡು ಪಟ್ಟಣಕ್ಕೆ ಬರುವ ಆತ ತಾತ್ಕಾಲಿಕವಾಗಿ ಹೊಟೇಲೊಂದರ ವೇಟರ್ ಆಗಿ ಕೆಲಸ ಆರಂಭಿಸುತ್ತಾನೆ. ಅವನು ಸೃಷ್ಟಿಸುವ ಹಾಸ್ಯ ಸನ್ನಿವೇಶಗಳು ಒಂದೆರಡಲ್ಲ. ಅವನ ಆ ಚಿತ್ರವಿಚಿತ್ರ ಸಾಹಸಗಳನ್ನೆಲ್ಲ ನೋಡುತ್ತಿದ್ದಂತೆ ಚಾರ್ಲಿ ಚಾಪ್ಲಿನ್ನೇ ಮನಸ್ಸಿಗೆ ಬರುತ್ತಾನೆ. ಇಂಥ ಪೆದ್ದುಪೆದ್ದಾದ ಜ್ಯೂಡೋ ಆ ಪಟ್ಟಣದಲ್ಲಿ ಶಾಲಾ ಶಿಕ್ಷಕಿಯಾಗಿರುವ ದೋರಾ ಎಂಬ ಚೆಲುವೆಗೆ ಮೋಹಿತನಾಗುವುದೇ ಮುಂದಿನ ಕಥೆಯ ನಾಂದಿ.

ದೋರಾಳ ಮದುವೆ ನಿಶ್ಚಿತಾರ್ಥ ಅದಾಗಲೇ ಅದೇ ಪಟ್ಟಣದ ಫ್ಯಾಸಿಸ್ಟ್ ಅಧಿಕಾರಿಯೊಬ್ಬನೊಂದಿಗೆ ಆಗಿಬಿಟ್ಟಿರುವುದರಿಂದ ಜ್ಯೂಡೋ ಈಗ ಆತನ ಅಘೋಷಿತ ಪ್ರತಿಸ್ಪರ್ಧಿಯಾಗುತ್ತಾನೆ. ಜ್ಯೂಡೋ ಮತ್ತು ದೋರಾ ನಡುವಿನ ಪ್ರೇಮ ಹದಗೊಳ್ಳುವ ಪರಿಯನ್ನು ತೆರೆಯ ಮೇಲೆ ನೋಡುವುದೇ ಒಂದು ಹಿತಾನುಭವ.

ಜ್ಯೂಡೋ ಒಬ್ಬ ಯಹೂದಿ. ದೋರಾ ಕುಲೀನೆ. ಆದರೆ ಅವರಿಬ್ಬರ ನಡುವಿನ ಪ್ರೇಮಕ್ಕೆ ಇದೊಂದು ತಡೆಗೋಡೆಯಾಗಿಲ್ಲ. ಆಕೆಯೂ ಅವನನ್ನು ಗಾಢವಾಗಿ ಪ್ರೇಮಿಸುತ್ತಾಳೆ. ತನ್ನ ಭಾವಿ ಪತಿಯೊಂದಿಗಿದ್ದ ಪಾರ್ಟಿಯೊಂದರಲ್ಲಿ ಆಕೆ ಮೇಜಿನಡಿಯಲ್ಲಿ ಯಾವುದೋ ನೆಪದಲ್ಲಿ ನುಸುಳಿ ಆತನನ್ನು ಚುಂಬಿಸುತ್ತಾಳೆ. "ನನ್ನನ್ನು ಇಲ್ಲಿಂದ ಎಲ್ಲಾದರೂ ದೂರ ಕರೆದುಕೊಂಡು ಹೋಗು ಮಾರಾಯಾ" ಎನ್ನುತ್ತಾಳೆ.

ಚಿತ್ರದ ಮುಂದಿನ ಭಾಗದ್ದು ಬೇರೆಯದೇ ಆದ ಮೂಡ್. ಅದು 1945ರ ಸಮಯ. ಮಹಾಯುದ್ಧ ಮುಗಿಯುವುದಕ್ಕಿಂತ ಸ್ವಲ್ಪ ಮುಂಚಿನ ಕಾಲ. ಅಷ್ಟೊತ್ತಿಗೆ ಬಹಳ ವರ್ಷಗಳೇ ಆಗಿಹೋಗಿವೆ. ಜ್ಯೂಡೋ ಮತ್ತು ದೋರಾ ಮದುವೆಯಾಗಿ ಅವರಿಗೊಬ್ಬ ಚೂಟಿ ಮಗ ಕೂಡ ಇದ್ದಾನೆ. ಅವನ ಹೆಸರು ಜೋಶುವಾ. ಇದುವರೆಗಿನ ಪ್ರೇಮದ ಹರಿವಿನ ಮುಂದೆ ಧುತ್ತನೆ ರೌದ್ರವೊಂದು ಎದುರಾಗುವುದು ಇನ್ನು ಮುಂದೆ.

ಜರ್ಮನ್ ಸೇನೆ ಯಹೂದಿಯಾದ ಜ್ಯೂಡೋ ಮತ್ತು ಆತನ ಮಗ ಜೋಶುವಾನನ್ನು ಮೃತ್ಯು ಶಿಬಿರಕ್ಕೆ ಯಹೂದಿಗಳನ್ನು ಒಯ್ಯುವ ರೈಲಿಗೆ ದಬ್ಬುತ್ತದೆ. ದೋರಾ ಯಹೂದಿಯಲ್ಲವಾದ್ದರಿಂದ ಅವಳಿಗೆ ಈ ಶಿಕ್ಷೆಯಿಲ್ಲ. ಆದರೆ ಆಕೆ ತನ್ನ ಗಂಡ ಮತ್ತು ಮಗನಿಗಾಗಿ ಆ ರೈಲನ್ನೇರಿಕೊಂಡುಬಿಡುತ್ತಾಳೆ.



ಇಂಥದೊಂದು ಭೀಕರ ಪ್ರಸಂಗದ ಎದುರಿನ ತಲ್ಲಣಗಳು ಏನೂ ಗೊತ್ತಿಲ್ಲದ ಮುಗ್ಧ ಮಗನನ್ನು ತಟ್ಟಬಾರದು, ಕಾಡಬಾರದು ಎಂಬ ಕಾಳಜಿಯಲ್ಲಿ ಜ್ಯೂಡೋ ವರ್ತಿಸುವ ಬಗೆಗಳಿವೆಯಲ್ಲ, ಅವೇ ಚಿತ್ರದ ಈ ಭಾಗದ ಜೀವಾಳ.

ಜೋಶುವಾನನ್ನು ಅವನ ಮುಗ್ಧತೆಯಲ್ಲೇ ಕಾಪಿಡಲು ತಂದೆ ಜ್ಯೂಡೋ ಆ ಇಡೀ ಚಿತ್ರದ ಸನ್ನಿವೇಶವನ್ನು ಒಂದು ಆಟವೆಂಬಂತೆ ಬಿಂಬಿಸುತ್ತಾನೆ. ಈ ಭಯಂಕರತೆ ಮುಂದೆ ಮಗ ತಲ್ಲಣಗೊಳ್ಳದೆಂದು ಸ್ವತಃ ತಾನೇ ಭೀಕರ ಮುಖವಾಡ ತೊಟ್ಟು ಮಗನನ್ನು ಹೆದರಿಸಿ, ಕಡೆಗೆ ಮುಖವಾಡ ತೆಗೆದು 'ಇದು ಇಷ್ಟೆ' ಎಂದು ತಿಳಿದು ಮಗ ಆತ್ಮವಿಶ್ವಾಸದಿಂದಿರುವಂತೆ ಮಾಡುವುದು ಇಂಥ ಒಂದು ಬಗೆ. ಅಲ್ಲಿನ ಅಮಾನವೀಯ ಮತ್ತು ಅನಿರೀಕ್ಷಿತ ಸನ್ನಿವೇಶಗಳ ಬಿಸಿ ಸ್ವಲ್ಪವೂ ಮಗನಿಗೆ ತಾಕದ ಹಾಗೆ ಜ್ಯೂಡೋ ತನ್ನ ತಮಾಷೆ, ಖುಷಿ ಮತ್ತು ಕಾಲ್ಪನಿಕ ಆಟಗಳ ಮೂಲಕ ನೋಡಿಕೊಳ್ಳುತ್ತಾನೆ. ಎಂಥದೇ ಸಂದರ್ಭದಲ್ಲೂ, ಜೀವನದ ಭೀಕರತೆ ಮಗನ ಗಮನಕ್ಕೆ ಬರಬಾರದು, ಬದುಕು ಸುಂದರವೆಂಬ ನಂಬಿಕೆ ಅವನಲ್ಲಿ ನಿರಂತರವಾಗಬೇಕು ಎಂಬ ಹಂಬಲದಲ್ಲಿ ಜ್ಯೂಡೋನ ತಮಾಷೆಗಳಿಗೆ ಬಹುದೊಡ್ಡ ಅರ್ಥವಂತಿಕೆಯು ಮಿಡಿತವಿರುವುದನ್ನು ಚಿತ್ರ ತೋರಿಸುತ್ತದೆ.

ಕಡೆಗೆ ತಾನು ಸಾವಿನ ಹತ್ತಿರಕ್ಕೆ ಹೋಗುತ್ತಿರುವ ಸಮಯದಲ್ಲೂ ಅದರ ಬಗೆಗಿನ ದುಗುಡ ಅವನ ಮುಖದಲ್ಲಿರುವುದಿಲ್ಲ. ಮಗನೆದುರು ಜೀವನದ ಸೊಗಸನ್ನೇ ಬಿಟ್ಟು ಕತ್ತಲಲ್ಲಿ ಸರಿದು ಹೋಗುತ್ತಾನೆ. ಕೊನೆಯಲ್ಲಿ ತಾಯಿ, ಮಗ ಒಬ್ಬರಿಗೊಬ್ಬರು ಸಿಕ್ಕುವುದರೊಂದಿಗೆ ಮನಸ್ಸು ತುಂಬಿಕೊಳ್ಳುತ್ತದೆ.

ನಾಝಿಗಳ ಕ್ರೌರ್ಯ, ಯಹೂದಿಗಳ ದುರಂತ- ಇವುಗಳ ನಡುವೆಯೇ ಸಾಗುವ ಕಥೆ, ಬದುಕಿನ ಸೊಗಸನ್ನು ಹುಡುಕಿಕೊಡುತ್ತದೆ. ನಾಝಿಗಳಿಗಾಗಲಿ, ಫ್ಯಾಸಿಸ್ಟರಿಗಾಗಲಿ ಬದುಕು ಸುಂದರವಲ್ಲ; ಆದರೆ ಮಾನವೀಯವಾದುದರ ಪಾಲಿಗೆ, ವಿನಾಶಗೊಳ್ಳುವ ಕನಸುಗಳಿಂದ ಒಳ್ಳೆಯದನ್ನು ಮತ್ತು ಭರವಸೆದಾಯಕವಾದುದನ್ನು ರಕ್ಷಿಸಿಕೊಳ್ಳುವ ತುಡಿತಕ್ಕೆ, ಭವಿಷ್ಯದ ಕುರಿತ ಆಶಾವಾದಕ್ಕೆ ಬದುಕು ಯಾವತ್ತೂ ಸುಂದರವೇ ಆಗಿದೆ ಎಂಬ ಧೋರಣೆಯನ್ನು ಚಿತ್ರ ಹೊಳೆಯಿಸುತ್ತದೆ.

ಹೃದಯವನ್ನು ಮಿಡಿಸಬಲ್ಲ ನಗುವಿನ ಶಕ್ತಿ ಮತ್ತು ಮಾನವತ್ವವನ್ನು ಮೆರೆಸಬಲ್ಲ ಕಲ್ಪನೆಯ ಶಕ್ತಿಯನ್ನು ಹೇಳುವ ಕಥನವೇ 'ಲೈಫ್ ಈಸ್ ಬ್ಯೂಟಿಫುಲ್.' ●

## ರಾಬರ್ಟೋ ಬೆನಿಗ್ನಿ

ರಾಬರ್ಟೋ ಬೆನಿಗ್ನಿ ಹಾಸ್ಯದ ಮೂಲಕವೇ ಜೀವನದ ಹೊಳಹು ಕಾಣಿಸುವಂಥ ಪಾತ್ರಗಳ ಸೃಷ್ಟಿಗೆ ಹೆಸರಾದ ನಿರ್ದೇಶಕ. 'ಲೈಫ್ ಈಸ್ ಬ್ಯೂಟಿಫುಲ್' ಚಿತ್ರದ ಕಥೆ ನಡೆಯುವ ಟುಸ್ಕನಿ ಪಟ್ಟಣ ಆತ ಹುಟ್ಟಿ ಬೆಳೆದ ಸ್ಥಳವೂ ಹೌದು. ಬೆನಿಗ್ನಿ ಸ್ವತಃ ಯಹೂದಿಯಲ್ಲದಿದ್ದರೂ ಆತನ ತಂದೆ ಯುದ್ಧದ ಸಂದರ್ಭದಲ್ಲಿ ಜರ್ಮನ್ನರ ಕೆಂಗಣ್ಣಿಗೆ ಗುರಿಯಾಗಿ ಜೈಲು ಅನುಭವಿಸಿದ್ದಿತ್ತು.



'ನಗು ನಮ್ಮನ್ನು ಕಾಯುವ, ವಿಷಯವೊಂದರ ಇತರ ಮಗ್ಗುಲುಗಳನ್ನು ನೋಡಲು ನಮ್ಮನ್ನು ಪ್ರೇರೇಪಿಸಬಲ್ಲ ಸಂಗತಿಯಾಗಿದೆ ಎಂದೇ ನಾನು ನಂಬುತ್ತೇನೆ. ಹಾಗೆಯೇ ಕೊನೆಯಿರದ ರಾತ್ರಿಗಳನ್ನು ಎದುರು ಹಾಕಿಕೊಂಡು ಬದುಕುವ ಶಕ್ತಿಯನ್ನು ಕೊಡಲು ಸಾಧ್ಯವಿರುವುದು ಕಲ್ಪನೆಗೆ ಎನ್ನುತ್ತಾನೆ ಬೆನಿಗ್ನಿ

ಬೆನಿಗ್ನಿಯ ಇತರ ಚಿತ್ರಗಳಾದ 'ಜಾನಿ ಸ್ಟೆಚಿನೋ', 'ದಿ ಮಾನ್ಸ್ಟರ್', 'ದಿ ಲಿಟ್ಲ್ ಡೆವಿಲ್'ಗಳಲ್ಲೂ ನವಿರು ತಮಾಷೆಯ ಮೂಲಕವೇ ಬದುಕು ಕಾಣಿಸುವ ಬಗೆಯಿದೆ. ಅವನ ಅವೆಲ್ಲ ಚಿತ್ರಗಳಿಗಿಂತ ಭಿನ್ನವಾಗಿ 'ಲೈಫ್ ಈಸ್ ಬ್ಯೂಟಿಫುಲ್' ಇದೆ

ಈ ಚಿತ್ರದಲ್ಲಿ ಡೋರಾ ಆಗಿ ನಟಿಸಿರುವ ನಿಕೊಲೆಟ್ಟಾ ಬ್ರೇಶಿ ನಿಜಜೀವನದಲ್ಲಿ ಸ್ವತಃ ಬೆನಿಗ್ನಿಯ ಪತ್ನಿ. ಆತನ ಬಹಳಷ್ಟು ಚಿತ್ರಗಳಲ್ಲಿ ಪಾತ್ರ ವಹಿಸಿರುವ ಇಟಲಿಯನ್ ನಟಿ ಆಕೆ.

# ಪ್ರೇಮಿಗಳೇ, ಹುಷಾರು!



**ಝಲಕ್**

'ಪ್ರಿಯ ಶಬನಮ್'

ಪ್ರಿಯ ಶಬನಮ್, ಪತ್ರದ ಶೈಲಿಯಲ್ಲಿ ಬರೆದ ಒಂದು ಸಾಮಾಜಿಕ ಯಥಾರ್ಥವಾದದ ಕಾದಂಬರಿ. ಇದು, ಸಂಸ್ಕಾರವಿಲ್ಲದ ವ್ಯಕ್ತಿಗೆ ತನ್ನ ನಿಯುಕ್ತಿಗೆ ಅಭಿವ್ಯಕ್ತಿಯನ್ನು ಕೊಡುವುದರ ಜೊತೆಗೆ ಸಾರ್ಥಕ ಜೀವನದ ದಿಕ್ಕನ್ನು ತೋರಿಸುವ ನಿರ್ದೇಶಕನ ಕಥೆಯಾಗಿದೆ. ಲೇಖಕ ದೇವೇಶ್ ಠಾಕೂರ್.

ಕಾದಂಬರಿಯ ನಾಯಕ ಮಂಗಲ್ ಮುಂಬಯಿಯ ಸೇಂಟ್ ಥಾಮಸ್ ಕಾಲೇಜಿನ ಉಪನ್ಯಾಸಕ. ಇಲ್ಲೇ ಶಬನಮ್ ಹೆಸರಿನ ಶ್ರೀಮಂತ ಹುಡುಗಿಯ ಪರಿಚಯವಾಗುತ್ತದೆ. ಅವಳು ಮನದಲ್ಲೇ ಮಂಗಲ್‌ನನ್ನು ಇಷ್ಟಪಡುತ್ತಾಳೆ. ಮಂಗಲ್ ಮತ್ತು ಶಬನಮ್‌ರ ನಡುವೆ ಗೋಡೆಯಂತೆ ಎದ್ದು ನಿಲ್ಲುತ್ತದೆ ಮಂಗಲ್‌ನ ಆರ್ಥಿಕ ಪರಿಸ್ಥಿತಿ. ತಂದೆ ಮಾಮೂಲಿ ಲಾರಿ ಚಾಲಕ, ತಾಯಿ ಪಕೋಡ ಮಾರಿ ತನ್ನ ಮತ್ತು ಮಗನ ಹೊಟ್ಟೆ ಹೊರೆಯುವವಳು. ಶಬನಮ್ ಶ್ರೀಮಂತೆ. ಅವಳ ತಂದೆ ನಗರದ ಪ್ರಸಿದ್ಧ ವಕೀಲ.

ಮಂಗಲ್‌ಗೆ ಶಬನಮ್‌ಳ ಜೊತೆಗಿರುವಾಗಲೆಲ್ಲ ಮನದಲ್ಲಿ ಕೀಳರಿಮೆ. ಯಾವಾಗಲೂ ತನ್ನ ಬಡತನ ಮತ್ತು ಶಬನಮ್‌ಳ ಶ್ರೀಮಂತಿಕೆಯ ಯೋಚನೆ. ಆದರೆ ಶಬನಮ್‌ಳ ಪ್ರತಿಭೆಯ ಮುಂದೆ ಆರ್ಥಿಕ ಪರಿಸ್ಥಿತಿಯನ್ನು ಅಳೆಯಲು ಸಾಧ್ಯವಾಗುತ್ತಿರಲಿಲ್ಲ. ಅವಳ ಪ್ರಕಾರ ಅಂತಸ್ತಿನ ಪ್ರಾಮುಖ್ಯತೆಯನ್ನ ವ್ಯಕ್ತಿಯ ಪ್ರತಿಭೆ, ಅವನ ಪ್ರಾಮಾಣಿಕತೆ ಮತ್ತು ಒಳ್ಳೆಯತನಗಳ ಜೊತೆ ಸೇರಿಸಬೇಕು. ಅವೆಲ್ಲವೂ ಮಂಗಲ್‌ನಲ್ಲಿತ್ತು.

ಮಂಗಲ್ ಒಮ್ಮೆ ಗದ್ಗದಿತನಾಗಿ ಹೇಳುತ್ತಾನೆ. "ನಾನು ನಿನ್ನನ್ನು ತುಂಬಿ ತುಳುಕುತ್ತಿರುವ ಹಸಿರಿನಿಂದ ಕಿತ್ತು ನನ್ನ ಮರುಭೂಮಿಯಲ್ಲಿ ಬಿತ್ತುತ್ತಿದ್ದೇನೆ. ನನ್ನ ಈ ಮರುಭೂಮಿ ಆರ್ಥಿಕ ಅಭಾವ ಮಾತ್ರವೇ ಅಲ್ಲ ಶಬನಮ್, ಸಂಸ್ಕಾರ, ವಾತಾವರಣ ಮತ್ತು ರೂಢಿಗಳೂ ಹೌದು. ಎರಡು ವಿರೋಧಿ ಮೇರೆಗಳು.... ನಾನು ಹೆದರುತ್ತಿದ್ದೆ. ನನ್ನಲ್ಲಿ ಒಂದು ಅಪರಾಧಿ ಭಾವ ಹುಟ್ಟುತ್ತಿತ್ತು. ಆದರೆ ಅಲ್ಲಿ ಒಳಗೊಳಗೆ ನನ್ನ 'ಪ್ರಾಣ' ಸಹಜ ಸಂತುಷ್ಟಿಯ ಸಿಗುತ್ತಿತ್ತು. ನನ್ನ ಒಂದು ನಿರ್ದೇಶನ ನಿನಗೆ ಆಜ್ಞೆಯಾಗುತ್ತಿತ್ತು."

ಈ ಕಥೆ ಸಾಮಾನ್ಯವಾಗಿ ಎಲ್ಲರ ಜೀವನದಲ್ಲಿ ಘಟಿಸಿರುವ, ಘಟಿಸುತ್ತಿರುವ ಘಟನೆಯಾಗಿದೆ. ಇಲ್ಲಿನ ಮಂಗಲ್ ಕೇವಲ ಕಥೆಯ ನಾಯಕ ಮಾತ್ರವಾಗಿರದೆ ಓದುವ ಪ್ರತಿಯೊಬ್ಬ ಯುವಕನ ಮನದಲ್ಲೂ ತನ್ನ ಛಾಪನ್ನು ಒತ್ತಿದ್ದಾನೆ. ಅತ್ತೆ-ಸೊಸೆಯರ ಜಗಳದಿಂದ ಜರ್ಝರಿತನಾದ ಮಂಗಲ್ ತನ್ನ ಮಾಜಿ ಪ್ರೇಯಸಿಗೆ ಪ್ರಿಯ ಶಬನಮ್ ಎಂದು ಸಂಬೋಧಿಸಿ ಬರೆಯುವ ಈ ಸುದೀರ್ಘ ಪತ್ರ ನಿಜಕ್ಕೂ ಮನ ಮುಟ್ಟುವಂತಿದೆ.

ಶಬನಮ್ ಜೊತೆಗಿನ ಪ್ರೀತಿಯನ್ನು ನಾಯಕ ಮರೆಯಲು ಸಾಧ್ಯವಾಗುವುದಿಲ್ಲ. ತಾನು

ಅವಳ ಸಂಬಂಧವನ್ನು ಕಡಿದುಕೊಂಡರೂ ಅದನ್ನು ಲಾಜೋಳಲ್ಲಿ ಕಾಣಲು ಸಾಧ್ಯವಾಗಲಿಲ್ಲ. ಕೇವಲ ದೈಹಿಕ ಆಕರ್ಷಣೆ ನಿಜವಾದ ಪ್ರೇಮಕ್ಕೆ ಸಮನಾಗುವುದಿಲ್ಲ ಎಂಬುದನ್ನು ಇದು ಸಾರುತ್ತದೆ.

ಮನುಷ್ಯ ಏನನ್ನೋ ಸಾಧಿಸಲು ಹೋಗಿ ಏನನ್ನೂ ಸಾಧಿಸಲಾಗದೆ, ಎಲ್ಲಾ ಕಡೆಗಳಲ್ಲಿಯೂ ಸೋತು ಸುಣ್ಣವಾದಾಗ ಆಗುವ ಮನೋವೇದನೆ ಈ ಕಥಾನಾಯಕನಲ್ಲಿಯೂ ಆಗುವುದನ್ನು ಕಾಣಬಹುದು. ಆದರೆ ಆಶಾವಾದಿಯಾದವನು ಇವುಗಳಿಗೆ ಸೊಪ್ಪು ಹಾಕದೆ ತನ್ನ ಯಶಸ್ಸನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾನೆ. ಸಮಾಜದಿಂದ ಗೌರವ ಪಡೆಯುವಲ್ಲಿ ತಿರಸ್ಕೃತರಾದ ಮೀನು ಹಿಡಿಯುವವರ ಏಳಿಗೆಗೆ ಶ್ರಮಿಸುವ ಅವನ ಸೇವೆಯಿಂದ ಅವನು ಎಲ್ಲರಿಗೂ ಇಷ್ಟವಾಗುತ್ತಾನೆ.

ಕೆಲವೊಮ್ಮೆ ಪಲಾಯನವಾದಿಯಂತೆ ಗೋಚರಿಸಿದರೂ ಅವನು ಸಮಾಜದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅತ್ತೆ-ಸೊಸೆಯ ಜಗಳದಿಂದ ಮನೆ ಬಿಟ್ಟು ಹೋದ ತಾಯಿ ತಂದೆಯರ ನೆನಪು ನಾಯಕನನ್ನು ಕಾಡುತ್ತದೆ. ಇದು ಭಾರತೀಯ ಸಂಸ್ಕೃತಿಗೆ ಹಿಡಿದ ಕನ್ನಡಿಯಾಗಿದೆ.

ಹೆಚ್ಚು ಪಾತ್ರಗಳಿಲ್ಲದ ಕೇವಲ 84 ಪುಟಗಳ ಈ ಪುಟ್ಟ ಪುಸ್ತಕ ದೇವೇಶ್ ಠಾಕೂರರ ಅಭಿವ್ಯಕ್ತಿ ಶೈಲಿಗೆ ಉತ್ತಮ ಉದಾಹರಣೆಯಾಗಿದೆ. "ಪುರುಷನಿಗೆ ಸ್ತ್ರೀ ಬಹಳ ದೊಡ್ಡ ಮೋಹವಾಗುತ್ತಾಳೆ. ಅವಳು ಆಕರ್ಷಣೆಯೂ ಕೂಡ. ಆದರೆ ಈ ಮೋಹವಲ್ಲಿ ಬೀಳುವ ಮೊದಲು ಸ್ವಲ್ಪ ಯೋಚಿಸಿದರೆ ಜೀವನ ದೊರಕುತ್ತದೆ. ಸ್ತ್ರೀ-ಪುರುಷರ ಸಂಬಂಧ ಬಹಳ ಎತ್ತರಕ್ಕೂ ಏರಬಹುದು. ಆದರೆ ಭಾವಾವೇಶಕ್ಕೆ ಸಿಕ್ಕ ಸಂಬಂಧ ದೊಡ್ಡ ಶಕ್ತಿಯನ್ನು ಕೂಡ ಕಣಿವೆಗೆ ತಳ್ಳಿಬಿಡುತ್ತದೆ' ಎಂದು ಹೇಳುವ ಮೂಲಕ, ಪ್ರೇಮದಲ್ಲಿ ಬೀಳುವ ಯುವಕರು ಮೊದಲು ಯೋಚಿಸಬೇಕೆಂಬ ದಿಕ್ಕನ್ನು ತೋರಿಸುತ್ತದೆ 'ಪ್ರಿಯ ಶಬನಮ್'.

**ಎನ್.ದೇವರಾಜ್**, ಬೆಂಗಳೂರು

# ದೇವೇಂದ್ರನ ಸೋಲು

ಸ್ವರ್ಗದ ವಿಲಾಸ ಜೀವನ ಬೋರ್ ಹೊಡೆದು, ಸ್ವರ್ಗದ ದೊರೆ ದೇವೇಂದ್ರ ಭೂಮಿಯತ್ತ ಹೊರಟ. ತನ್ನ ಮುಖಂಡ ವಿಷ್ಣು ಅವತಾರ ಎತ್ತಲು ಪ್ರತಿ ಬಾರಿಯೂ ಭಾರತಕ್ಕೆ ಹೋದಂತೆ, ಈತನೂ ಭಾರತದ ಮೇಲೆಯೇ ಆಗಸದಲ್ಲಿ ವಿಹರಿಸತೊಡಗಿದ.

ಮುಂಬೈ ಮೇಲೆ ಸಾಗುತ್ತಿದ್ದಾಗ, ಆತನಿಗೆ ಒಂದೆಡೆ ಭಾರೀ ಜನ ಸಂದಣಿ ಕಂಡು ಕುತೂಹಲ ಕೆರಳಿತು. ಕೆಳಕ್ಕೆ ಇಳಿದ. ಮನುಷ್ಯ ರೂಪ ತಾಳಿ ಜನ ಜಂಗುಳಿಯತ್ತ ಸಾಗಿದ.

ಅದೊಂದು ಸಿನಿಮಾ ಚಿತ್ರೀಕರಣ ನಡೆಯುತ್ತಿದ್ದ ತಾಣವಾಗಿತ್ತು. ತಾರೆ ಮಾಧುರಿ ದೀಕ್ಷಿತ್ ನಾಯಕಿ ಪಾತ್ರದಲ್ಲಿ ಅಭಿನಯಿಸುತ್ತಿದ್ದಳು.

ಮಾಧುರಿ ದೀಕ್ಷಿತ್‌ಳ ಸೌಂದರ್ಯ ಕಂಡು ದೇವೇಂದ್ರನ ರಸಿಕತೆ ಜಾಗೃತವಾಯಿತು. ಆಕೆಯತ್ತ ಏನೇನೋ ಕೈ ಸನ್ನೆ ಮಾಡಿದ. ಆಕೆಗೆ ಏನೂ ಅರ್ಥವಾಗಲಿಲ್ಲ.

ಮನುಷ್ಯ ರೂಪಿ ದೇವೇಂದ್ರನ ಒದ್ದಾಟ ಅರ್ಥವಾದ ಮುಂಬೈ ನಾಗರಿಕನೊಬ್ಬ "ನೀನು ಕಣ್ಣು ಹೊಡಿ ಮಾರಾಯ" ಎಂದ.

ದೇವೇಂದ್ರ ಮಾಧುರಿಯತ್ತ ಕಣ್ಣು ಹೊಡೆಯಲು ಯತ್ನಿಸಿದ. ಆದರೆ ಆತನಿಗೆ ಕಣ್ಣು ರೆಪ್ಪೆಗಳೇ ಇಲ್ಲದೆ ಕಣ್ಣು ಹೊಡೆಯಲು ಸಾಧ್ಯವಾಗಲಿಲ್ಲ.

ವಿಫಲನಾದ ದೇವೇಂದ್ರ, ವಿಷಣ್ಣವದನನಾಗಿ ಸ್ವರ್ಗದತ್ತ ಮರು ಪಯಣ ಬೆಳೆಸಿದ.

ಜೇಬಿ



# ಮಳೆ ಹೊತ್ತು



## ಸೋಡಿದ್ಯೇನೆ ಅಕ್ಕ?

**ಮೊನ್ನೆ** ಸಖತ್ ಮಳೆ ಬಂದು ಬೆಂಗಳೂರಿಗೆ ಬೆಂಗಳೂರೇ ಒದ್ದೆಯಾದ ಹುಡುಗಿ ಥರ ಮುದುಡಿಕೊಂಡು ಕುಳಿತಿತ್ತಲ್ಲ ಆ ದಿನ; ಮಳೆ ನಿಲ್ಲುವುದನ್ನೇ ಕಾಯೋಣವೆಂದು ಒಂದು ಮನೆ ಮುಂದೆ ಹೋಗಿ ನಿಂತೆ. 'ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ' ಹೊರಗೆ ಲೈಟೂ ಇರಲಿಲ್ಲ. ಕತ್ತಲು, ಕಗ್ಗತ್ತಲು. ಭಯಂಕರ ಗುಡುಗು ಮಿಂಚು. ಬಾನು–ಭೂಮಿ ಒಂದಾದ ಹಾಗೆ ಧಾರಾಕಾರ ಹನಿ. ಮನೆಯಲ್ಲಿ ಅವ್ವ ಮುದ್ದೆ ಮಾಡಿಟ್ಟುಕೊಂಡು ಕಾಯುತ್ತಿರುತ್ತಾಳೆ.

ಇವತ್ತು ಏನಾದ್ರೂ ಮಾಡಿ ಆ ಕಥೆ ಬರೆದು ಮುಗಿಸಬೇಕು. ಬೆಕ್ಕು ಕಣ್ಣಿನ ಹುಡುಗಿ ಮತ್ತು ಅದೇ ನೀಲಿ ಕಣ್ಣಿನ ಹುಡುಗ ನಿಜಕ್ಕೂ ಅವನದು ಅದ್ಭುತ ಕಣ್ಣುಗಳು. ಎಂಥವರನ್ನಾದರೂ ಸೆಳೆದುಬಿಡುವಂತಹುದು. ಹಾಗೇ ಅಲ್ಲವೆ ಅವಳೂ ಅವನಿಗೆ ಮನಸ್ಸು ಸೋತಿದ್ದು. 'ನಾನು ನೀನು ಸುಮ್ಮನೆ ಫ್ರೆಂಡ್ ಥರ ಕಣೋ' ಅಂತಿದ್ದವಳೇ ಇದ್ದಕ್ಕಿದ್ದಂತೆ ಒಂದು ದಿನ 'I love you ಕಣೋ' ಎಂದು ಹೇಳಿಸಿದ್ದು ಅವನ ಆ ನೀಲಿ ಕಣ್ಣುಗಳೇ ಅಲ್ಲವೆ!

ಥೆ! ಈ ಮಳೆ ಏನಾದರೂ ನಿಲ್ಲುತ್ತಿಲ್ಲ. ಒಳಗೊಳಗೇ ಛಳಿ ಬೇರೆ. ಯಾಕೋ ಮೈ ಹಿಡಿದಂತೆ. ಎದುರಿಗಿನ ಮನೆ ಹುಡುಗಿ ಇಣುಕಿ ನೋಡಿ ಪಟಕ್ಕಂತ ಬಾಗಿಲು ಹಾಕಿದಳು. ಮಿಂಚೊಂದು ಮಿಂಚಿ ಬೆಳಕು ನನ್ನ ಮೈ ಸವರಿದಂತೆ. ಮನೆಯೊಳಗಡೆ ಮಾತುಕತೆ. ಹೊರಗಿನ ಮಳೆಯದ್ದು ತಾಳ ಹಾಕಿದಂತಿತ್ತು. ಏನೋ ಜೋರು ಮಾತು. ಗಡಗಡ ಓಡಾಟ. ಕುಡುಕ ಗಂಡನಿರಬಹುದೇ? ಹೊರಗೆ ಬಂದು ನನ್ನನ್ನು ನೋಡಿ 'ಯಾರೋ ನೀನು ಬೇಕೂಫ್' ಅಂತ ಬೈದು ಕಳಿಸಿದರೆ? ಮಳೆ ನಿಲ್ಲಲಿಲ್ಲ. ಕಾಲಡಿ ಪುಟ್ಟ ತೊರೆ. ಯಾಕೋ ಎರಡು ಹನಿ ಹಿಡಿಯಬೇಕೆನ್ನಿಸಿ ಕೈ ಚಾಚಿದೆ. ಅಲ್ಲಿನ ಸಾವಿರ ಹನಿಗಳು. ಬೊಗಸೆ ತುಂಬ ಹನಿ, ಹನಿ... ಖುಷಿಯೆನಿಸಿತು.

ಮಳೆ ಮತ್ತೂ ಜೋರಾಯಿತು. ಒಳಗಡೆ ಮತ್ತದೇ ಗಜಿಬಿಜಿ. ಹೊರಗಡೆ ನಾನು ಮತ್ತು ಕತ್ತಲೆ. ನಡುವೆ ಬರೀ ಮಳೆ–ಕತ್ತಲು ನಾನು ಒಟ್ಟಿಗೆ ಬೆರೆತಂತೆ. ಒಳಗಡೆ ತುಂಬಾ ಜನರಿರಬೇಕು. ಕದಕ್ಕೆ ಕಿವಿಯಾನಿಸಿದೆ. ಆ ಗಡಸು ದನಿ ಗಂಡನದು; ಹೌದು ಅಷ್ಟೊಂದು ನಯವಾದ ಮಾತಂತೂ ಖಂಡಿತಾ ಹೆಂಡತಿಯದು; ಅಳುತ್ತಿರುವುದು ಮಗು; ಆ ಇನ್ನೊಂದು ಅಪ್ಪಾ ಎನ್ನುತ್ತಿದೆ. ಮಗದೊಂದು ಅಮ್ಮಾ ಎನ್ನುತ್ತಿದೆ. ಮೂರು ಮಕ್ಕಳಿರಬೇಕು; ಅದ್ಯಾವುದೋ ಗೊರಲು ಕೆಮ್ಮು ಅಜ್ಜಿಯಿರಬೇಕು; ಓಹ್, ಮತ್ತೊಂದು... ಇದ್ಯಾಕೋ ಅಸ್ಪಷ್ಟವಾಗಿತ್ತು... ಕಟ್ಟದ ಹಾದಿ ಹಿಡಿದು ಮನೆಯೊಳಗಿನ ಮನಸ್ಸುಗಳ ಬೇಟೆ

ಮಳೆ ನಿಲ್ಲುವುದಿಲ್ಲ. ಯಾರೋ ಒಂದಿಬ್ಬರು ರಸ್ತೆಯಲ್ಲಿ ಹಾದು ಹೋದರು. ಅದೇ ಸಮಯಕ್ಕೆ ಸಣ್ಣಗೆ ಕದ ತೆರೆದು ಹೊರಗೆಲ್ಲ ಬೆಳಕು ಚಿತ್ತಾರ ಮೂಡಿಸಿತು.

"ಸಖತ್ ಮಳೆ, ಯಾರೋ ಹೊರಗೆ ನಿಂತಿದ್ದಾರೆ ಕಣೆ"

"ಅಪ್ಪ ನಾನು ಪುಟ್ಟ ದೋಣಿ ಬಿಡಲೆ"

"ಬಾಗಿಲು ಹಾಕ್ರಿ ಅತ್ತೆಗೆ ಶೀತವಾದೀತು"

"ಅಮ್ಮಾ ನನಗೆ ಮಳೆಯಲ್ಲಿ ಕುಣಿಯಬೇಕು"

"ಕತ್ತೆ, ಶೀತ ಆದ್ರೆ ಏನ್ಮಾಡ್ತೀಯಾ?"

ಮಳೆ ನಿಂತಿತು. ಹಾಗಂದುಕೊಂಡೆ. ನಿಜಕ್ಕೂ ಮಳೆ ನಿಂತಿರಲಿಲ್ಲ. ಅಲ್ಲಿ ಮಾತ್ರ ನನಗೆ ನಿಲ್ಲಲಾಗಲಿಲ್ಲ.

**ರವಿಕುಮಾರ್ ಅಜ್ಜೀಪುರ, ಬೆಂಗಳೂರು**



ಕವಿಸಾಲು



# ಚಿತ್ರಾಂಗದೆ

□ ಸುಧಾಶರ್ಮ ಚವತ್ತಿ

ಸಿಟಿಬಸ್‌ನಲ್ಲಿ ನುಗ್ಗಿ; ಸುಸ್ತಾಗಿ
ಮನೆಯ ಬೀಗ ತೆಗೆದು
ಕತ್ತಲೆಗೆ ದೀಪ ಹಚ್ಚಿದರೆ
ಹಾಗೇ ಇಟ್ಟ ಪಾತ್ರೆ; ಒಡೆದ ಹಾಲು
ತೆರೆದೇ ಇರುವ ಡಿಕಾಕ್ಷನ್; ಕಾಯಿತುರಿ
ಒಣಗಿಸಿದ ಬಟ್ಟೆ, ಟಿ.ವಿ ಮೇಲೆ ಬಿಲ್
ಯಾರಿಗಾಗೋ ಕಾದಂತಿದ್ದ ಖಾಲಿಗೋಡೆ.

ಪುಸ್ತಕ ಹಿಡಿದೇ ನಿದ್ದೆಹೋಧ
ಮಗನ ಬಾಯಿ ತೆಗೆಸಿ; ತುತ್ತು ತುರುಕಿ
ನೀರು ತುಂಬಿ; ನಾಳೆಗೆಲ್ಲ ತಯಾರಿ ಮುಗಿಸಿ
ಮಲಗುವಾಗ ರಸ್ತೆಯಲ್ಲಿ ಗೂರ್ಖಾನ ಸೀಟಿ.
ಇಲಿಯೋ, ಜಿರಲೆಯೋ ಅತ್ತಿತ್ತ ಸರಿದ ಶಬ್ಧ
ಹಗಲು ರಾತ್ರಿಗಳ ಚಕ್ರಕ್ಕೆ ತಲೆಕೊಟ್ಟಾಗಿದೆ.
ತಪ್ಪಿಸಿಕೊಳ್ಳುವುದು ಸಾಧ್ಯವೇ ಇಲ್ಲ.

"ನಿಮಗೇನು ಬಿಡಿ ಹೇಗೂ ಒಬ್ರೆ"
ಎನ್ನುವವರ ಮಾತಲ್ಲಿ
ಇಣುಕುವ ಅಸೂಯೆ.
ಅಪ್ಪನ ಮುಷ್ಠಿಯೊಳಗೆ
ಮಗನ ಎಳೆಬೆರಳು ಹೆಣೆದು
ತರಕಾರಿ ಚೀಲದಲ್ಲಿ ಮೊಳ ಮಲ್ಲಿಗೆ ಬರಬಹುದು
ಎಲ್ಲ ಸರಿ ಹೋಗಿ ನಾಳೆಯಿಂದಲೇ
ಹೊಸ ಬದುಕು ಶುರುವಾದೀತೆಂದು
ಕಾದು; ಕಾದು ಅಭ್ಯಾಸವಾಗಿದೆ.
ಅದೀಗ ದಿನಚರಿ.

ದೇವರೇ ಅರ್ಜುನ ಮತ್ತೆ
ಬರುವುದು ಬೇಡ;
ಬಂದು ಹೋದ ದಿನಗಳ ನೆನಪಲ್ಲಿ
ಮತ್ತೆ ಬಂದಾನೆಂಬ ನಿರೀಕ್ಷೆಯಲ್ಲಿ
ಮೊಳೆತ ಕನಸುಗಳಲ್ಲೇ ನಾನು ಸುಖಿ.

# ಮಳೆಹನಿ



**ಹೊ**ಳೆ ದಡದ ಮಣ್ಣು
ಪುಸ್ತಕ್ಕೆಂದು ಕುಸಿದು
ನೀರಿಗೆ ಬಿದ್ದರೆ
ಎಲ್ಲಿಂದಲೋ ತೇಲಿ ಬಂದ
ಕಾಗದದ ದೋಣಿ
ಅದರೊಳಗಿಟ್ಟು ಕಳುಹಿಸಿದ
ಚದುರಂಗಿ ಹೂ
ಏನಾಗಿರಬಹುದು?

★

ಮಳೆಯ ನೆಗಸಿನ
ಕೆಂಪು ನೀರಿನ ಚಹ
ಗರಟೆಯ ತೂತಲ್ಲಿ
ಸೋರಿ ಸೋರಿ ಹೋಗುತ್ತಿದೆ.

★

ಅರಲ ಗದ್ದೆಯಲ್ಲಿ
ನೆಟ್ಟಿ ಮಾಡುವ ಹೆಂಗಸರ
ರಾಜಕುಮಾರಿ ಹಾಡು.
ಗದ್ದೆ ಹಾಳೆಯ ಮೇಲೆ
ಕಂಬಳಿ ಕೊಪ್ಪೆ ಹುಡುಗಿ
ಇವರಿಬ್ಬರ ಮಧ್ಯೆ ಮಳೆ.

# ದಣಿವು

ಹಾಳೆ ಮಗುಚಿದ ಹಾಗೆ
ಹೊರಳಿ ಹೋಗುವ ದಿನಗಳು.
ಕಳೆದೇ ಹೋದ ನಿನ್ನೆಗಳಲ್ಲಿ
ನಾಳೆಗಾಗಿ ಉಳಿದಿದ್ದೇನು?

ಸೋತ ಕಾಲುಗಳನ್ನು
ಮತ್ತೆ ಅಖಾಡಕ್ಕಿಳಿಸಿ.
ಸವೆದ ಚಪ್ಪಲಿ ಮೆಟ್ಟಿ
ಸುತ್ತಿ ಸುತ್ತಿ ಬಂದರೂ
ಹೋಗುವುದೆಲ್ಲಿ ಗೊತ್ತಿಲ್ಲ.
ಎದ್ದು ಬರುವ ಹೊಸ ಬೆಳಗನ್ನು
ಕಾಯುತ್ತ ಕೂತಿದ್ದು ಯಾತಕ್ಕಾಗಿ.



ಬರುವ ಎಲ್ಲ ನಾಳೆಗಳೂ
ನಿನ್ನೆಗಳಾಗಿ ಬಿಡುತ್ತವೆ.
ನಡೆದು ನಡೆದು ಸುಸ್ತಾದರೂ
ನಡೆಯದೆ ಇರಲಾಗದು
ನಮ್ಮ ಸುತ್ತ ನಾವೇ ಸುತ್ತುತ್ತ
ನಮ್ಮನ್ನು ನಾವೇ ಹುಡುಕುತ್ತ
ಕೊನೆ ಮೊದಲಿರದ ಈ ಓಟಕ್ಕೆ
ಯಾವ ಹೆಸರಿಟ್ಟು ಕರೆಯಲಿ?

ಎಲ್ಲಿಗೂ ಎಳೆಯಬೇಡ ನನ್ನ
ಇಲ್ಲಿ ನಿಂತಲ್ಲೇ ನಿಂತು
ತೆರೆದ ಬಾನಲ್ಲೇ ಹೊಸ ಬೆಳಕನ್ನು
ಇಳಿಸಂಜೆಯ ಸೂರ್ಯನನ್ನು
ಎಳೆಹಲ್ಲು ಬಿಟ್ಟ ಹುಲ್ಲನ್ನು ನೋಡುತ್ತೇನೆ.
ಓಡಿ ಓಡಿ ದಣಿವ
ಗೆದ್ದು ಬೀಗುವ ಆಟಕ್ಕೆ
ನಾ ಇನ್ನು ಬರಲಾರೆ; ಬಿಟ್ಟುಬಿಡು.

●



# ನೀನು ಮತ್ತು ಅವಳು

❑ ಬಿ.ನರೇಶ್ ಮುಳ್ಳೇರಿಯಾ

ಅತ್ತು ನಕ್ಕಾಗ
ತೊಳೆದು ರಂಗೋಲಿ ಹಾಕಿದ ಅಂಗಳ
ನಿನ್ನ ಕಣ್ಣುಗಳು
ಅವಳ ಸದಾ ತುಂಬಿದ ಕಂಗಳಲ್ಲಿ
ನಾನು ಮುಳುಗುತ್ತಿದ್ದೇನೆ

ನೀನು ಮಧು ತುಂಬಿದ ಭಾಂಡ
ಉಕ್ಕುವ ನೊರೆಯ ಹರೆಯದವಳು
ಅವಳ ಖಾಲಿ ಲೋಟಾದಲ್ಲಿ
ನನಗೆ ಕೊಡಲು ತೊಟ್ಟು ವಿಷವೂ ಇಲ್ಲ

ನನ್ನೆದೆಯಲ್ಲಿ
ಹೂತೋಟ ನಿರ್ಮಿಸಲು ನೀನು
ನಗೆ ನೇಗಿಲಿನಿಂದ ಇರಿಯುವಾಗ
ಅವಳ ಕಣ್ಣೀರು
ಚಿಮ್ಮಿ ನನ್ನ ನೆಲ
ಆರ್ದ್ರವಾಗುತ್ತದೆ

ನೀನು ರೂಪಸಿ! ಅದ್ಭುತ ಸೊಗಸಿನಿಂದ ಕಾಡಿ
ನನ್ನ ಗೆಲ್ಲುತ್ತಿರುವಾಗ
ಅವಳು ತಾಪಸಿ ಅಪಾರ ಕರುಣೆಯಿಂದ
ನೋಡಿ ನನ್ನ ಕೊಲ್ಲುತ್ತಿದ್ದಾಳೆ.

# ಬ್ರಹ್ಮ ಕಮಲ

ಹೃದಯವಂತಿದ್ದ
ಬ್ರಹ್ಮಕಮಲದ ಮೊಗ್ಗಿನಂತಿದ್ದ
ಮುಷ್ಟಿಯನ್ನು ಬಿಡಿಸಿದಾಗ
ಆ ಮೃದುತ್ವ ಇನ್ನೂ ನೆನಪಿದೆ
ರೇಶಿಮೆಯಂತೆ ನವಿಲಗರಿಯಂತೆ
ಅಂಗೈ ಥಳಥಳಿಸಿತ್ತು
ನಸುಗೆಂಪು ಗುಲಾಬಿ ಪಕಳೆಗಳು
ಆ ಬೆರಳುಗಳು
ಇನ್ನೂ ನೆನಪಿದೆ
ರೇಖೆಗಳ ಮೇಲೆ ಮದರಂಗಿ ಚಿತ್ತಾರ
ಗರಿಬಿಚ್ಚಿ ಕೂತಿತ್ತು

ಮೊನ್ನೆ ನಿನ್ನ ಅದೇ ಅಂಗೈಗಳೆರಡೆದುರಾಗಿ
ಒಂದನ್ನೊಂದು ಮುಟ್ಟಿ ನಮಸ್ಕರಿಸಿದವು
ಬಿಡಿಸಲಾಗಲಿಲ್ಲ
ಬಿಡಿಸಿ ಬಚ್ಚಿಟ್ಟಿದ್ದನ್ನು ನೋಡಿ
ಬೆರಗಾಗಲಾಗಲಿಲ್ಲ

ಬಿಡು! ಅದಕ್ಕಾಗಿ ವಿಷಾದಿಸುವುದಿಲ್ಲ ನಾನು
ಬ್ರಹ್ಮಕಮಲ ಎಲ್ಲಾ ಸಮಯ
ಅರಳಿಬಿಡುವುದೇನು?



❑ ಅಂಜನಾ ಹೆಗಡೆ

# ನೀನೇನೂ ರಾಮನಲ್ಲ



ಇಲ್ಲ
ಇನ್ನೆಂದೂ ನಾ ಬರುವುದಿಲ್ಲ.
ನಿನ್ನ ಬೆನ್ನು ಹತ್ತಿ
ಹಿಡಿಯುವುದಿಲ್ಲ ನೀ ತುಳಿದ ದಾರಿ.
ಬೆಚ್ಚನೆಯ ಉಸಿರು
ತಬ್ಬಿಕೊಳ್ಳಲೆಂಬ ನನ್ನ ಆಸೆಗೆ
ನಿಲ್ಲಿಸಿಕೊಳ್ಳುವುದಿಲ್ಲ ನಿನ್ನ.

ಕೆಳಬಿದ್ದ ಕಣ್ರೆಪ್ಪೆ
ಜೊತೆಗಷ್ಟು ಕನಸುಗಳ
ಮುಷ್ಟಿಯಲ್ಲಿ ಹಿಡಿದಿಟ್ಟು
ಗಾಳಿಗೆ ತೂರಿದ್ದು ಯಾರ ಮನೆಯ
ಕಸದ ಬುಟ್ಟಿ ತುಂಬಿಸೀತೆಂದು...
ಹೆದರಬೇಡ
ನಿನ್ನನ್ನಂತೂ ಕೇಳುವುದಿಲ್ಲ.

ನಿನ್ನದೇ ನೆನಪಲ್ಲಿ
ಕೈತುಂಬ ಎಳೆದುಕೊಂಡ
ಮೋಹದ ಮದರಂಗಿ
ಮೊನ್ನೆ ಕೆಂಪಗೆ ಹೊಳೆದು
ನಿನ್ನೆ ನೆನಪಿಗೆ ಇಳಿದು
ಬೇರು ಬಿಡುವ ಮೊದಲೇ
ಕಿತ್ತು ಬರುತ್ತಿರುವ ದುಃಖ
ನಿನ್ನನ್ನೂ ತಟ್ಟಲೆಂದು
ನಾನು ಬಯಸುವುದಿಲ್ಲ.

ಅಲ್ಲವೇ ಅಲ್ಲ
ಇದು ನೋವಲ್ಲ.
ನಿನ್ನ ಕಿವುಡುತನವೀಗ
ನನ್ನ ಕಂಗೆಡಿಸುವುದಿಲ್ಲ.

ನೀ ಬಿಟ್ಟುಹೋದ ದೃಷ್ಟಿ
ಕೊಟ್ಟು ಹೋದ ಮಾತು
ಎಲ್ಲ ನಗುತ್ತ
ನಿನ್ನ ಹಿಂದೆಯೇ ಹೊರಟಿವೆ.
ಕಲಿಯುಗದಲ್ಲಿ
ಶಬರಿಯರಿಲ್ಲ.

# ಮನೆ ಮತ್ತು ಸೆರೆಮನೆ

ನೀನು ಸೂರ್ಯಕಾಂತಿಯ ಒಂದು ಬೀಜ ತಂದೆ.
ಹಗಲ, ಒಂದು ಎಲೆ ನಾನು.
ನೀನು ಬೊಗಸೆ ತುಂಬ ಬೆಳದಿಂಗಳು ಹಿಡಿದು ಬಂದೆ.
ರಾತ್ರಿಯಿಡೀ ನೃತ್ಯ ನಾನು.

ನೀನು ಜಿಂಕೆಯ ಕಣ್ಣೀರು ತಂದೆ.
ನಾನು ಕಾಡುಕೀಟದ ಜೇನುತುಪ್ಪ.
ನೀನು ಸ್ವರ್ಗದ ಒಂದು ರೆಕ್ಕೆ ಹಿಡಿದು ತಂದೆ.
ನಾನು ದೇವರ ಶಬ್ದ.

ನಾವು ಕಟ್ಟಿದ ಮನೆ ಬೆಳ್ಳಗಿತ್ತು.
ಅದರಲ್ಲಿ ಪೂರಾ ಕರ್ರನೆಯ ಮಕ್ಕಳಿದ್ದರು.
ಅವುಗಳ ಅಳು ಸಹಿಸಲಾಗದೆ
ನಾನು ಭತ್ತದ ತೆನೆಯ ಹುಡುಕಾಟದಲ್ಲಿ
ಸೂರ್ಯನ ಕಡೆ ಹೊರಟೆ.

ಒಂದು ಕಪ್ಪು ಮೋಡದ ಒಳಗೆ
ಈಗ ನನ್ನ ರೆಕ್ಕೆ ಹಾಗೂ ಹಾಡುಗಳು
ಇಲ್ಲಿ ಸೆರೆಮನೆಯಲ್ಲಿವೆ.

ನನ್ನ ಒಂಟಿತನ
ಮುಗಿಲ ಗುಡುಗಿನಲ್ಲಿ ಮಾತಾಡುತ್ತಿದೆ.
ಮಿಂಚಿನ ಹೊಳೆತದಲ್ಲಿ
ನಾನು ನನ್ನ ಮನೆ ಹುಡುಕುತ್ತಿದ್ದೇನೆ.

ಥಂಡಿ ಬಂದ ಕೂಡಲೇ ನನ್ನ ಹಾಡು
ಮಳೆಯಾಗಿ ಸುರಿಯುತ್ತದೆ-
ನಮ್ಮ ಬಿಳೀ ಮನೆಯ ಮೇಲೆ.
ನಮ್ಮ ನಡುವಿನ ಕಪ್ಪು ಶೂನ್ಯತೆಯ ಮೇಲೆ.

ಮಲಯಾಳಂ ಮೂಲ : ಕೆ.ಸಚ್ಚಿದಾನಂದನ್
ಕನ್ನಡಕ್ಕೆ : ಸಿ.ವಿ.ಶೇಷಾದ್ರಿ ಹೊಳವನಹಳ್ಳಿ





ಕತೆಯ ಬಾಜೂ ಕೂತು

# ಸಾವಿನ ಕುರಿತ ಕವನಗಳಿಗೆ ಮಾರುಹೋಗಿದ್ದವನು!

ಕಲ್ಕತ್ತೆಯಲ್ಲಿ ನಡೆದ-ಬಾಂಗ್ಲಾದೇಶ ಮತ್ತು ಪಶ್ಚಿಮ ಬಂಗಾಲ ವಿಮೋಚನೆಯ 'ಮುಕ್ತಿದಶಕ' ಎಂದೇ ಹೆಸರಾದ ಚಳವಳಿಯಲ್ಲಿ ತೊಡಗಿಕೊಂಡು 1084ನೇ ನಂಬರಿನ ಶವವಾಗಿ ಹೋದ 'ಬ್ರತಿ' ಎಂಬ ಯುವಕನ ಕಥನವು ಮಹಾಶ್ವೇತಾದೇವಿಯವರ 'ಹಜಾರ್ ಚೌರೇಶೀರ್ ಮಾ' ಕಾದಂಬರಿಯಲ್ಲಿದೆ.

ಮಗ 'ಬ್ರತಿ' ಹುಟ್ಟುವಾಗ ತಾಯಿ,ಸುಜಾತಾ, ಒಬ್ಬಳೇ ಆಸ್ಪತ್ರೆಗೆ ಹೋಗಿ ಏಕಾಂಗಿಯಾಗಿ ಹಡೆದು, ಹಸುಗೂಸನ್ನೆತ್ತಿಕೊಂಡು ಮನೆಗೆ ಬಂದಿರುತ್ತಾಳೆ. ಮೊದಲ ಮೂರು ಮಕ್ಕಳು ಜನಿಸುವಾಗ ಇದ್ದ ಅವಳ ಅತ್ತೆ ಅದೇ ವೇಳೆಗೆ ಉದ್ದೇಶಪೂರ್ವಕ ಊರಿಗೆ ಹೋಗಿದ್ದಾಳೆ. ಈ ಭೂಮಿಗೆ ಶಿಶುಗಳನ್ನು ತರುವ ತನ್ನ ಗುರುತರ ಕಾರ್ಯದಲ್ಲಿ ಪ್ರೀತಿ-ವಿಶ್ವಾಸಗಳೇ ಇಲ್ಲದ ಈ ಪರಿಸರಕ್ಕೆ ಮುಗ್ಧ ಮಕ್ಕಳು ಬಂದು ಬೀಳುವ ಬಗ್ಗೆ ಸುಜಾತಾಗೆ ಅಂದಿನಿಂದ ಆತಂಕ ಹುಟ್ಟಲು ಪ್ರಾರಂಭ.

'ಬ್ರತಿ' ಅತಿ ಚಿಕ್ಕವನಿರುವಾಗಲೇ ತಂದೆ ದಿವ್ಯನಾಥ ಚಟರ್ಜಿಯ ಆದೇಶದಂತೆ ತಾಯಿಯಿಂದ ಬೇರೆಯಾಗಿ ಏಕಾಂಗಿಯಾಗಿ ಮಲಗಲು ಅತಿಕಷ್ಟದಿಂದ ರೂಢಿಸಿಕೊಳ್ಳುತ್ತಾನೆ. ಆಗ ಸುಜಾತಾಳ ಚಡಪಡಿಕೆ ಕಠಿಣ ಮನಸ್ಸುಳ್ಳ ದಿವ್ಯನಾಥನ ಒಳಗಣ್ಣಿಗೆ ಬೀಳುವುದಿಲ್ಲ. ಬ್ರತಿಗೆ ಆಶ್ಚರ್ಯ. ಅಣ್ಣ ಮತ್ತು ಇಬ್ಬರು ಅಕ್ಕಂದಿರು ಅಪ್ಪನ ಕ್ಲೀಷೆಯೆನ್ನಿಸುವ ಶಿಸ್ತಿಗೆ ಹೊಂದಿಕೊಂಡು ಮುಖದಲ್ಲಿ ಅನವಶ್ಯಕ ಗಾಂಭೀರ್ಯ ಮತ್ತು ವೇಷಭೂಷಣಗಳಲ್ಲಿ ಸಾಮ್ಯ ಕಾಯ್ದುಕೊಂಡು ಸ್ವಂತದ ವ್ಯಕ್ತಿತ್ವವನ್ನೇ ಕಳಕೊಂಡವರಂತಿರುತ್ತಾರೆ. ಆಗೆಲ್ಲ ಬ್ರತಿ ಒಂಟಿಯಾಗಿ ತನ್ನ ಕೋಣೆಯ ಕಿಟಕಿಯ ಹೊರ ನೋಡುತ್ತ ಸಾವಿನ ಬಗ್ಗೆ ಬರೆದ ಕವನಗಳನ್ನು ರೋಮಾಂಚನದಿಂದ ಓದುತ್ತಿರುತ್ತಾನೆ. ತಂದೆ ದಿವ್ಯನಾಥನೆಂದರೆ ಅವನಿಗೆ ಎಲ್ಲಿಲ್ಲದ ಭಯ. ತಂದೆಯ ಹಿಂದೆ ಆತ ಅವನನ್ನು 'ಬಾಸ್' ಎಂದೇ ಸಂಬೋಧಿಸುವುದು.

ದಿವ್ಯನಾಥ ತನ್ನ ಟೈಪಿಸ್ಟಳೊಂದಿಗೆ ಅಕ್ರಮ ಸಂಬಂಧ ಹೊಂದಿದ್ದರೂ ಸುಜಾತಾ ಮೌನವಾಗಿರಬೇಕು. ಅಂಥ ಭಿನ್ನಾಭಿಪ್ರಾಯದಲ್ಲೂ ದಿವ್ಯನಾಥ ಹೆಂಡತಿಯ ಪಕ್ಕದಲ್ಲೇ ಮಲಗಬೇಕು. ತನಗೆ ಆರ್ಥಿಕ ಮುಗ್ಗಟ್ಟು ಎದುರಾದಾಗ ಹೆಂಡತಿಯನ್ನು ಒಂದು ಬ್ಯಾಂಕಿನಲ್ಲಿ ನೌಕರಿ ಹಿಡಿಯಲು ಪ್ರೇರೇಪಿಸಿ, ಹಣದ ಅಗತ್ಯ ತೀರಿದ ನಂತರ ಕೆಲಸ ಬಿಡಲು ಒತ್ತಾಯಿಸುತ್ತಾನೆ. ಸುಜಾತಾ ಕೆಲಸದಿಂದ ಸಿಗುವ ನೆಮ್ಮದಿಗಾಗಿ ಅವನ ಮಾತಿಗೆ ಒಪ್ಪುವುದಿಲ್ಲ. ಆಗಿನಿಂದ ವೈಮನಸ್ಯ ಶುರು. 'ಬ್ರತಿ' ಯುವಕನಾಗುತ್ತಾನೆ. ತಾಯಿಯ ದಿನದ ಒಂದು ಇಷ್ಟವಾದ ಕೆಲಸವೆಂದರೆ ತನ್ನ ಕಿರಿಮಗನೊಂದಿಗೆ ಬಿಡುವು ಮಾಡಿಕೊಂಡು ಹರಟುವುದು. 'ಬ್ರತಿ' ತನ್ನ ತಾಯಿಯಂತೆಯೇ ಕುಟುಂಬದ ಆಪ್ತ

ಸಂವಾದಕ್ಕೆ ಮಿಡಿಯುವ, ಯಾರನ್ನಾದರೂ ಪ್ರೀತಿಸ ಬೇಕು, ಗೌರವಿಸಬೇಕು ಮತ್ತು ಎಲ್ಲರ ಪ್ರೀತಿಗೆ ತಾನೂ ಒಳಗಾಗಬೇಕು ಎಂಬ ನಿರಂತರ ಹಂಬಲದವನು.

ಆಗಾಗ ಹೊಟ್ಟೆನೋವಿನಿಂದ ನರಳುವ ತಾಯಿಗೆ ದೊಡ್ಡಮಕ್ಕಳು ಕಣ್ಣಲ್ಲಿ ಕಣ್ಣಿಟ್ಟು ಸಹ ನೋಡದೇ ಕರ್ತವ್ಯ ವೆಂಬಂತೆ ಲಿಂಬು ಶರಬತ್ತು ಮಾಡಿಕೊಡುತ್ತಾರೆ. ಸಣ್ಣ ಮಗ ಬ್ರತಿ ಮಾತ್ರ ತನ್ನ ಶರ್ಟಿನ ಗುಂಡಿ ರಿಪೇರಿ ಮಾಡಿಲ್ಲವೆಂದೊ, ಬೆಳಗ್ಗೆಯ ಚಳಿಗೆ ಅಮ್ಮ ಬೆಚ್ಚನೆ ಶಾಲು ಹೊದ್ದುಕೊಂಡಿಲ್ಲವೆಂದೊ ರೇಗುವುದು ಸುಜಾತಾಗೆ ಹಿತವಾಗಿರುತ್ತದೆ. ಮನೆಮಂದಿಯಿಂದ ಕೆಲಸಕ್ಕೆ ಬಾರದವನೆಂದು ಹಣೆಪಟ್ಟಿ ಹೊತ್ತ, ಅಮ್ಮನ ಮುದ್ದು ಮಗನೆಂದೇ ಹೀಯಾಳಿಸಲ್ಪಡುವ 'ಬ್ರತಿ', ಏನು ಮಾಡುತ್ತಿದ್ದೇನೆಂದೇ ಯಾರಿಗೂ ತಿಳಿಸದೇ ತನ್ನೆಲ್ಲ ಶೌರ್ಯ, ಧೈರ್ಯಗಳನ್ನು ಸಾವಿನಲ್ಲಿ ತೋರಿಸಿಬಿಡು ತ್ತಾನೆ. ಬಾಂಗ್ಲಾದೇಶಕ್ಕೆ ಸಹಾನುಭೂತಿ ಹಾಗೂ ಬೆಂಬಲ ಸೂಚಿಸುವ ಸಮಯದಲ್ಲಿ ಪಶ್ಚಿಮ ಬಂಗಾಲವನ್ನು ಅಲ್ಲೋಲ ಕಲ್ಲೋಲ ಮಾಡಿದ ಬರ್ಬರತೆ-ಕ್ರೌರ್ಯ ಗಳ ಚಿತ್ರಗಳು ಕಣ್ಣಿಗೆ ಕಟ್ಟಿ ನಿಲ್ಲುತ್ತವೆ. ನಿರ್ದಯವಾದ ರಾಜಕೀಯ ವರ್ತನೆಗಳಲ್ಲಿ ಪ್ರತಿಭಟನೆಗಳನ್ನೊಡ್ಡುವ



ಸಾರ್ವಜನಿಕ ಚಳುವಳಿಗಳೂ, ನಡೆದು ಹೋಗುವ ಹತ್ಯಾಕಾಂಡಗಳೂ ಹೊರ ಕಣ್ಣುಗಳಿಗೆ ಕಾಣದೇ ಉಳಿದು ಹೋಗುವುದು ತೀರಾ ಅಮಾನವೀಯ ವೆನಿಸುತ್ತದೆ. ಇಂಥ ಹತ್ಯೆಗೆ ಹೆಚ್ಚಾಗಿ ಬಲಿಯಾಗುವ ವರು 'ಬ್ರತಿ'ಯಂಥ ತರುಣರು. ತನ್ನ ಮುದ್ದು ಮಗನ ಮುಖವನ್ನು ಕಣ್ತುಂಬ ನೋಡಿ ಹಣೆಗೊಂದು ಮುತ್ತು ಕೊಟ್ಟು ಹಿಂತಿರುಗಬೇಕೆಂದಿರುವ ಸುಜಾತಾ, ಮುಖವೇ ಇಲ್ಲದಂತೆ ಬರ್ಬರವಾಗಿ ಹತ್ಯೆಗೀಡಾದ ಮಗನ ಬೆರಳು, ನೀಲಿ ಶರ್ಟು, ತಲೆಗೂದಲನ್ನು ನೋಡಿ ಗುರ್ತಿಸಬೇಕಾದ ಪರಿಸ್ಥಿತಿ. ಕೊಂಚ ಅಶಿಸ್ತು ರೂಢಿಸಿಕೊಂಡಿದ್ದರೂ ಮಾನವೀಯ ಸಂಬಂಧಗಳ ಕೊಂಡಿಯಂತಿರುವ ಮಗ ಬ್ರತಿ ನಿಸ್ವಾರ್ಥ ಸಾವು ಪಡೆ ದಿದ್ದು ತಾಯಿಯ ಮನಸ್ಸಿಗೆ ಒಂದು ಕ್ಷಣ ಹೆಮ್ಮೆಯಾಗಿ ಕಂಡರೂ, ತಂದೆ ಆಗಲೇ ಮಗನನ್ನು ದ್ರೋಹಿ ಎಂಬಂತೆ ಕಡೆಗಣಿಸಿದ್ದು ಸಹಿಸಲ ಸಾಧ್ಯವಾಗಿರುತ್ತದೆ.

ಮಗ ಸತ್ತು ಹೋದ ಮರುದಿನ ವೃತ್ತ ಪತ್ರಿಕೆಗಳಲ್ಲಿ ಎಲ್ಲಿಯೂ ಬ್ರತಿಯ ಹೆಸರು ಅಚ್ಚಾಗದಂತೆ ನೋಡಿ ಕೊಳ್ಳುವಲ್ಲಿ ತನ್ನ ಪ್ರಭಾವ ಬಳಸಿ ದಿವ್ಯನಾಥ ಯಶಸ್ವಿ ಯಾಗಿರುತ್ತಾನೆ. ಮಗ ಸತ್ತದ್ದಕ್ಕೂ ಎಲ್ಲಿಯೂ ಸಾಕ್ಷಿ ಉಳಿಸಿರುವುದಿಲ್ಲ. ಮಗನ ಶವವನ್ನು ನೋಡಲು ಹೋಗುವುದಾಗಿ ಹಠ ಮಾಡುತ್ತಿದ್ದ ಸುಜಾತಾಗೆ ತನ್ನ ಕಾರನ್ನೂ ಬಳಸಕೂಡದೆಂದು ಆಜ್ಞಾಪಿಸುತ್ತಾನೆ. ಇಂಥದೊಂದು ವಿವಾದಾತ್ಮಕ ಸಾವಿಗೆ ಮಗ ತುತ್ತಾದ ನೆಂದು ಹೇಳಿಕೊಳ್ಳುವುದು ಅವನಿಗೆ ನಾಚಿಕೆಯ ಹಾಗೂ ಸ್ವಪ್ರತಿಷ್ಠೆಗೆ ಅಡ್ಡಿಯಾಗುವ ವಿಷಯವಾಗಿರು ತ್ತದೆ. ಆತ ಸಭ್ಯಗೃಹಸ್ಥ ಹಾಗೂ ಸಜ್ಜನ ನಾಗರಿಕನೆಂಬ ವರ್ತುಳದಲ್ಲಿ ಬಂಧಿಯಾದವನಂತೆ ವರ್ತಿಸುತ್ತಾನೆ.

ನಂತರ ಮನೆಯಲ್ಲಿ ಬ್ರತಿಯ ನೆನಪು ಹುಟ್ಟಿಸುವ ಅವನ ಶೂಗಳು ಮತ್ತು ರೇನ್‌ಕೋಟನ್ನು ನಾಶಮಾಡಿ ಅವನ ಇರವಿನ ಕುರುಹನ್ನೇ ಅಳಿಸಿ ಹಾಕಲು ಪ್ರಯತ್ನಿಸುವುದು ಸುಜಾತಾಗೆ ಇನ್ನಷ್ಟು ವೇದನೆಯನ್ನು ತರುತ್ತದೆ.

ಸಭ್ಯರೆಂಬುವರ ಜಗತ್ತಿನ ಸೋಗು, ವಿಕಾರ, ಪೊಳ್ಳುತನ ಮತ್ತು ಅಮಾನವೀಯ ಮುಖಗಳನ್ನು ಹೇಳುವ ಈ ಕಥೆಯಲ್ಲಿ, ನಮ್ಮ ದಾರಿಯುದ್ದಕ್ಕೂ ಜೊತೆಯಾಗಿರುವವರು ಬ್ರತಿ ಮತ್ತು ಆತನ ತಾಯಿ.

**ಸುನಂದಾ ಪ್ರಕಾಶ ಕಡಮೆ**



ನೀರಹಾಡು



# ಅಲ್ಲಿ ನಾವು ಸಿಪ್ಪೆ ಕಳಚಿಟ್ಟ ಕಿತ್ತಳೆಯಂತೆ

❑ ಎಂ.ಆರ್.ಗಿರಿಜ

ಡೈರಿ ಬರೆಯುವ ಹವ್ಯಾಸಕ್ಕೆ ಹಲವು ಮುಖ. ನಾವು ಡೈರಿಯಲ್ಲಿ ಬರೆಯುವುದು ಯಾರಿಗಾಗಿ? ಚಿಕ್ಕವರಿದ್ದಾಗ ಎಲ್ಲರೂ ಡೈರಿ ಬರೆಯುತ್ತಾರೆ. ಅಂತೇ ನಾನೂ ಎಂದು ಹೊರಟೆ. ಡೈರಿ ಬರೆಯುವವರ, ಅದರಲ್ಲೂ ಎಳೆಯರ ಫಜೀತಿ ಅಷ್ಟಿಷ್ಟಲ್ಲ. ಡೈರಿ ಎಂದು ಯಾವುದೋ ಇಸವಿಯ ಒಂದು ಅಂಜೂರದ ಬಣ್ಣದ ಮೆತ್ತಮೆತ್ತನೆಯ, ಬೆಣ್ಣೆ ಹಾಳೆಯ ಪುಸ್ತಕವನ್ನು ಎದೆಗವಚಿ ಹಿಡಿದುಕೊಳ್ಳಬಹುದು. ಆದರೆ ಅದರಲ್ಲಿ ಬರೆದರೆ, ಅದನ್ನು ಬೇರೆಯವರು ಕದ್ದೋದಬಹುದಲ್ಲಾ ಎಂಬ ಆತಂಕ. ಅದರಲ್ಲೂ ನಮಗೇ ಡೈರಿ ಕದ್ದು ಓದುವ ಖಯಾಲಿ ಇದ್ದರಂತೂ ಬಿಡಿ. ನಮ್ಮ ಡೈರಿ ಸಾಹಿತ್ಯದ ಮೇಲೆ ಎಷ್ಟು ನಿಗಾ ವಹಿಸಿದರೂ ಸಮಾಧಾನವಿಲ್ಲ.

ಅದಕ್ಕೇ ಸಣ್ಣವರಿದ್ದಾಗ ನಾನು, ನನ್ನ ಇಬ್ಬರು ಗೆಳತಿಯರು ಯಾರಿಗೂ ಗೊತ್ತಾಗಬಾರದೆಂದು, ಹಳೆಯ, ಅರ್ಧ ಬರೆದ ನೋಟ್‌ಬುಕ್ಕಿನಲ್ಲಿ ಬರೆಯುವುದೆಂದು ಒಂದು ದಿನ ನಿಶ್ಚಯಿಸಿದೆವು. ಹೀಗೆ ಒಂದು ದಿನ ನಾವು ನಿರ್ಧಾರಕ್ಕೆ ಬರುತ್ತಿದ್ದೆವೋ ಇಲ್ಲವೋ, ಆದರೆ ಕನ್ನಡ ತರಗತಿಯಲ್ಲಿ ಮೇಷ್ಟರು ಅಕಸ್ಮಾತ್ತಾಗಿ ಯಾರೋ ಅನ್ನಾ ಫ್ರಾಂಕ್ ಎಂಬೋ ಹುಡುಗಿ ಜೈಲಿನಲ್ಲಿದ್ದಾಗ ಡೈರಿ ಬರೆದಿದ್ದಾಳಂತಪ್ಪಾ ಎಂದು ತಮಗೆ ತಿಳಿದದ್ದನ್ನು ಹೇಳುತ್ತಿದ್ದರು. ಮುಂದೆ ಅವರು ನಾಜಿ, ಹಿಟ್ಲರ್ ಅಂತ ಏನೇನೋ ಹೇಳಿದರೂ ನಮ್ಮ ಕಿವಿಯಲ್ಲಿ, ಅಂದು ಸಂಜೆ ಹಕ್ಕಿ ಗೂಡಿಗೆ ಸೇರುವಾಗ ಉಳಿದದ್ದು ಡೈರಿ ಎಂಬ ಒಂದೇ ಪದ.

ಸರಿ, ಒಂದಿನ ತರಗತಿಯ ಲೇಖಕ್ ನೋಟ್‌ಬುಕ್ಕಿನ ಮಧ್ಯದಲ್ಲಿ ಹಾಳೆ ಮಡಿಚಿ

ಶಿಸ್ತಾಗಿ ಇಂಕು ಪೆನ್ನಿಗೆ ಧವತಿಯಿಂದ ಶಾಯಿ ಹಾಕಿಕೊಂಡು ಕುಳಿತೆ. ನನಗೆ ನೀಲಿ ಮಸಿ ಇಷ್ಟ. ಕಪ್ಪೆಂದರೆ ಯಾಕೋ ಸೇರದು. ಬಿಳಿ ಹಾಳೆಯನ್ನು ನೀಲಿ ಅಕ್ಷರಗಳಿಂದ ತುಂಬಿಸುತ್ತಾ ಹೋದೆ. ಸಂಜೆ ಕುಳಿತವಳಿಗೆ ಮುಸ್ಸಂಜೆ ಜಾರಿದ್ದು, ಮನೆಯಲ್ಲಿ ದೀಪ ಹಚ್ಚಿದ್ದು, ಅಣ್ಣ ಒಳಗೆ ಜಾಗಟೆ ಬಡಿದು ಪೂಜೆ ಮಾಡಿದ್ದು, ಅಮ್ಮ ಅವರೆಕಾಳು ಸಾರು ಮಾಡಿದ್ದು ಒಂದೂ ಗೊತ್ತಿಲ್ಲ. ತಟ್ಟೆ ಮುಂದೆ ಕೂತು ಕುದಿಯುತ್ತಿದ್ದ ಅನ್ನಕ್ಕೆ ಕೈ ಹಾಕಿ ಚುರ್ ಎಂದು ಕೈ ಸುಟ್ಟು ಹೋ ಎಂದು ತಲೆ ಎತ್ತಿದಾಗಲೇ ಜಗತ್ತಿಗೆ ಮರಳಿದ್ದು. ಮಾರನೇ ದಿನ ಗೆಳತಿಯರೊಂದಿಗೆ ನಮ್ಮ ನಮ್ಮ ಬರಹಗಳನ್ನು ತೋರಿಸಿ, ಅವರನ್ನು ಖುಷಿಗೊಳಿಸಲೆಂದು ಅವರ ಬಗ್ಗೆ ಚಂದವಾಗಿ ಬರೆದು ಹೆಮ್ಮೆ ಪಟ್ಟದ್ದು, ಬೀಗಿದ್ದು ಎಲ್ಲವೂ ಈಗ ಸುಂದರ ನೆನಪು.

ಮುಂದೆ, ಡೈರಿ ಬರೆಯುವುದನ್ನು ನಿಜಕ್ಕೂ ಗಂಭೀರವಾಗಿ ಪರಿಗಣಿಸಿದಾಗ, ಸದ್ದಿಲ್ಲದೆ ಅಡಗಿ ಕೂತ ಮನದ ಮಾತುಗಳು ಹಾಳೆಗಳ ಮೇಲೆ ದಾರಿ ಮಾಡಿಕೊಂಡು ಮೂಡುವಾಗ ಆದ, ಆಗುವ ವಿಸ್ಮಯ ಅಷ್ಟಿಷ್ಟಲ್ಲ. ಬರೆಯುವ ಖುಷಿಯೋ ಅಥವಾ ಪುಟ ತುಂಬಿಸೋ ಖಯಾಲಿಯೋ, ನಿಜಕ್ಕೂ ಡೈರಿ ಬರೆಯುವುದು ಒಂದು ಸುಖಮಯ ಯಾತನೆ. ಯಾತನೆ ಏಕೆಂದರೆ ನಾವು ಅಲ್ಲಿ ಸಿಪ್ಪೆ ಕಳಚಿಟ್ಟ ಕಿತ್ತಳೆಯಂತೆ. ಸಿಪ್ಪೆ ಸುಲಿದಾಗ ನೋಯುತ್ತವೆ. ಬೆಳಗಿನಿಂದ ಆಡಿದ ಮಾತುಗಳ ರಿಂಗಣ, ಚಂಡೆಮದ್ದಳೆ ನಿಂತು ಮೌನ ಕವಿದಿರುತ್ತದೆ. ಅದನ್ನು ಶಾಯಿ ತುಂಬಿದ ಪೆನ್ನಿನಿಂದ ಸ್ವಲ್ಪ ಸ್ವಲ್ಪವೇ ಸವರುತ್ತಾ ತೆವಳಬೇಕಾಗುತ್ತದೆ. ಇದರಲ್ಲಿ ಚೆನ್ನಾದ ಬರಹ ಎಂದಿಲ್ಲ. ನಾವು ನಮ್ಮನ್ನು ಅಂದಂದೇ ಪರೀಕ್ಷೆಗೆ ಒಡ್ಡಿಕೊಳ್ಳಬೇಕು. ಯಾರೂ ಅರಿಯದ ದೊಡ್ಡ ಅಗ್ನಿಪರೀಕ್ಷೆಯೆಲ್ಲ ಮುಗಿಯುವ ಹೊತ್ತಿಗೆ ಮನೆಯ ಉಳಿದವರು ಒಂದು ನಿದ್ದೆ ತೆಗೆಯುತ್ತಾರೆ. ಕತ್ತಲೆಯ ರಾತ್ರಿಯಲ್ಲಿ ಹಚ್ಚಿಟ್ಟ ಎಣ್ಣೆ ದೀಪ ಕಂತುತ್ತಿರುತ್ತದೆ. ದೀಪಕ್ಕೆ ಎಣ್ಣೆ ತುಂಬಿಸಿ, ಬತ್ತಿಯನ್ನು ಸ್ವಲ್ಪವೇ ಮುಂದೆ ದೂಡುವುದರಲ್ಲಿ ಯಾವುದೋ ಮಧುರಾಲಾಪಕ್ಕೆ ಕಿವಿಯ ಒಳತಮಟೆಗಳು ಸಜ್ಜುಗೊಳ್ಳುತ್ತಿರುತ್ತವೆ... ಎಲ್ಲ ಮುಗಿದಾಗ ಒಂದು ಬಗೆಯ ನಿರುಮ್ಮಳತೆ... ಮುಂಜಾನೆ ಕೋಳಿ, ಹಾಲಿನವನು, ಪೇಪರಿನವನು ಯಾರ ಚಂಡೆಯೂ ಕೇಳುತ್ತಿಲ್ಲ.

●





ಕಥನ



# ಅಮೆರಿಕನ್ ಗೊಂಬೆ

❑ ಉಗಮ ಶ್ರೀನಿವಾಸ್

**ಅಂ**ತೂ ಹಾಸಿಗೆಯಲ್ಲಿ ಹೊರಳಾಡಿ, ಮಗ್ಗಲು ಮುರಿದು ಕಣ್ಣು ಬಿಟ್ಟಾಗ ಸುಬ್ಬರಾಯನಿಗೆ ಕಂಡದ್ದು ಊನಗೊಂಡ ಒಂದು ಮರದ ಗೊಂಬೆ. ಅದು ತನ್ನನ್ನು ಅಣಕಿಸುತ್ತಿರುವಂತೆ ಕಿಚಾಯಿಸುತ್ತಿರುವಂತೆ ಭಾಸವಾಗಿ, ರಗ್ಗನ್ನು ಎಳೆದುಕೊಂಡು ಆ ಗೊಂಬೆ ತನ್ನ ಪುಟ್ಟ ರೂಮಿನೊಳಗೆ ಬಂದ ಬಗ್ಗೆ ಯೋಚಿಸುತ್ತಾ ಹೋದ.

ಅದು ಡಿಸೆಂಬರ್ ತಿಂಗಳ ಅಮಲಿನಂತ ಚಳಿ. ಎಂದಿನಂತೆ ರಾತ್ರಿ ತನ್ನ ಗೆಳೆಯರೊಡನೆ ಸ್ಪಿರಿಚುಯಲ್ ಯಾತ್ರೆ ಮುಗಿಸಿಕೊಂಡು ಬಾರ್‌ಗೆ ಹೊಕ್ಕಿದ್ದ. ತಾನು ಕೂತಿದ್ದ ಕೌಂಟರ್‌ನ ಎದುರಿಗಿದ್ದ ಎರಡು ಪಟ್ಟದ ಗೊಂಬೆಯನ್ನು ಕಣ್ಣು ಕೀಳದೇ ನೋಡುತ್ತಿದ್ದ. ಅದು ನಿಂತ ಭಂಗಿ, ಕಣ್ಣಲ್ಲಿದ್ದ ಕಾಂತಿ, ಮರದ ಗೊಂಬೆಯಲ್ಲೂ ಜಿನುಗುತ್ತಿದ್ದ ನಗು ಹೀಗೆ ನೋಡುತ್ತಲೇ ಇದ್ದಂತೆ ಆ ಗೊಂಬೆ ಬಂದು ತನ್ನೊಡನೆ ಹರಟುತ್ತಿದ್ದಂತೆ ತನ್ನ ಖುಷಿ ಹಂಚಿಕೊಳ್ಳುತ್ತಿದ್ದಂತೆ ನೋವಿನಲ್ಲಿ ಭಾಗಿಯಾಗುತ್ತಿದ್ದಂತೆ ಭಾಸವಾಗಿ ಏರುತ್ತಿದ್ದ ಅಮಲಿನಲ್ಲಿ ಗೊಂಬೆ ನಿಜಕ್ಕೂ ಸುಬ್ಬರಾಯನಿಗೆ ಆಪ್ತ ಗೆಳೆಯನಂತಾಗಿತ್ತು.

ಆತ ರಾತ್ರಿ ಬಲಿಯುತ್ತಿದ್ದಂತೆ ಸುಬ್ಬರಾಯನ ಗೆಳೆಯರೆಲ್ಲಾ ತಮ್ಮ ಮನೆ ಹಾದಿ ಹಿಡಿದರೆ ಏರುತ್ತಿದ್ದ ಅಮಲಿನಲ್ಲಿ ಅವನಿಗೆ ಪಟ್ಟದ ಗೊಂಬೆಯ ಕೊರಳಿನಲ್ಲಿದ್ದ ಮಣಿ ಸರ ಕಣ್ಣು ಕುಕ್ಕುತ್ತಿತ್ತು.

ಸುಬ್ಬರಾಯ ಹುಡುಗನಾಗಿದ್ದಾಗ ಆತನ ಅಮ್ಮ ತಂದುಕೊಟ್ಟಿದ್ದ ಸರವನ್ನು ಇಳಿಬಿಟ್ಟಿದ್ದು ನೆನಪಾಗಿ ಕೊರಳನ್ನು ಮುಟ್ಟಿಕೊಂಡ. ಬೋಳಾಗಿದ್ದ ಕೊರಳನ್ನು ಗಿಂಟಿಕೊಂಡು ಗೊಂಬೆಯ ಮೈ ದಡವಲು ಶುರುವಿಟ್ಟ. ಮೈ ದಡವಿದಂತೆಲ್ಲಾ ಇಡೀ ಗೊಂಬೆಗೆ ಜೀವ ಬಂದಂತಾಗಿ ತನ್ನನ್ನೇ ಕೆಕ್ಕರಿಸಿ ನೋಡುತ್ತಿದೆ ಎಂಬಂತೆ ಭಾಸವಾಗಿ ಮತ್ತಷ್ಟು ಪೆಗ್ಗು ಏರಿಸಿಕೊಂಡು ಗೊಂಬೆಯೆಡೆ ಕಣ್ಣು ನೆಟ್ಟ. ಉರಿಯುತ್ತಿದ್ದ ಗೊಂಬೆಯ ಕಣ್ಣು ತನ್ನ ಕಣ್ಣನ್ನೇ ಸುಟ್ಟು ಬೂದಿ ಮಾಡುತ್ತಿದೆ ಎಂದೆನಿಸಿ ಟೇಬಲ್ಲಿಗೆ ಮುಖವೊಡ್ಡಿದಾಗ ಸುಬ್ಬರಾಯನ ಕಣ್ಣ ಮುಂದೆ ಗೊಂಬೆಗಳ ಸಾಲು ಸಾಲೇ ಕಾಣುತ್ತಾ ಹೋಯಿತು.

ಸುಬ್ಬರಾಯನ ಅಮ್ಮನಿಗೆ ಒಂದು ಖಯಾಲಿ ಇತ್ತು. ಯಾವುದೇ ಊರಿಗೋಗಲಿ ಅಲ್ಲಿಂದ ಒಂದಿಷ್ಟು ಮರದ ಗೊಂಬೆ, ಮಣ್ಣಿನ ಗೊಂಬೆ ತರುವುದು ಈಕೆಯ ಅಭ್ಯಾಸ. ಅತ್ತ ಬೆಂಗಳೂರು, ಇತ್ತ ಮೈಸೂರು ಅಷ್ಟೇಕೆ ದೂರದ ತಿರುಪತಿಯಿಂದಲೂ ಗೊಂಬೆಯನ್ನು ತಂದು ಮನೆಯ ಅಟ್ಟದಲ್ಲೊಂದಿಷ್ಟು, ಕಬ್ಬಿಣದ ಟ್ರಂಕಿನಲ್ಲಿಷ್ಟು ಕೊನೆಗೆ ತನಗೆ ಇಷ್ಟವಾಗಿದ್ದ ಎರಡು ಪಟ್ಟದ ಗೊಂಬೆಯನ್ನು ದೇವರ ಮನೆಯಲ್ಲಿ ಇಟ್ಟಿದ್ದಳು.

ರಾಧೆ, ಕೃಷ್ಣ ಯಶೋದ, ಬುದ್ಧ ಹೀಗೆ ದೇವರ ಗೊಂಬೆಗಳೂ ಸೇರಿದಂತೆ ನಾಯಿ, ಆನೆ, ಕೋಳಿ, ಗಿಣಿ ಮುಂತಾದ ಪ್ರಾಣಿ ಪಕ್ಷಿಗಳ ಗೊಂಬೆಗಳಿಗೂ ಮನೆಯಲ್ಲಿ ಜಾಗ ಕೊಟ್ಟಿದ್ದಳು.

ನವರಾತ್ರಿ ಬಂತೆಂದರೆ ಆಕೆಯ ಸಂಭ್ರಮ ಹೇಳ ತೀರದು. ಮೂರು ರೂಮಿನ ಪುಟ್ಟ ಮನೆಯ ಅಟ್ಟದಲ್ಲಿ, ಟ್ರಂಕಿನಲ್ಲಿಟ್ಟಿದ್ದ ಗೊಂಬೆಗಳನ್ನು ಕೂರಿಸುತ್ತಿದ್ದಳು. ಪೇರಿಸಿಟ್ಟ ಗೊಂಬೆ ಸಾಲಿನ ಮುಂದೆ ಒಂದು ಹಿತ್ತಾಳೆ ತಟ್ಟೆಯಲ್ಲಿ ತಾನೇ ಮುತುವರ್ಜಿ ವಹಿಸಿ ಬೆಳೆಸಿದ್ದ ರಾಗಿ ಪೈರಿನ ಮಧ್ಯೆ ಆಕೆ ಎರಡು ಅಮೆರಿಕನ್ ಲೇಡಿ ಗೊಂಬೆ ಇಡುತ್ತಿದ್ದಳು.

ಗೊಂಬೆ ಬಾಗಿನಕ್ಕೆ ಬರುತ್ತಿದ್ದ ಹೆಂಗಸರು, ಮಕ್ಕಳು, ಯುವಕರು ಹೀಗೆ ಎಲ್ಲರಿಗೂ ಕಣ್ಣು ಕುಕ್ಕುತ್ತಿದ್ದುದು ಈ ಅಮೆರಿಕನ್ ಲೇಡಿ ಗೊಂಬೆಗಳು ಮತ್ತು ಪಟ್ಟದ ಗೊಂಬೆಗಳು. ಈ ಅಮೆರಿಕನ್ ಲೇಡಿ ಗೊಂಬೆ ಈಕೆಯ ಅಜ್ಜಿಯಿಂದ ಬಂದ ಬಳುವಳಿ. ಅದು ಮೊದಲು ಕೇವಲ ಗಾಜಿನ ಗೊಂಬೆಯಾಗಿತ್ತು. ಆಕೆಯೇ ಆ ಗೊಂಬೆಗೆ ಸಣ್ಣ ಸಣ್ಣ ಮಣಿಯನ್ನು ಕ್ರೋಶಾ ಕಡ್ಡಿಯ ಸಹಾಯದಿಂದ ಲಂಗ ಮೇಲೆ ಜಂಪರ್ ಹೊಲೆದು ಅಲಂಕಾರ ಮಾಡಿ ಅಮೆರಿಕನ್ ಲೇಡಿ ಎಂದು ಹೆಸರಿಟ್ಟಿದ್ದಳು.

ಹೆಬ್ಬೆಟ್ಟು ಗಾತ್ರದ ಆ ಎರಡು ಪುಟ್ಟ ಗೊಂಬೆಗಳನ್ನು ಅಷ್ಟೇ ಪುಟ್ಟದಾದ ಪೆಟ್ಟಿಗೆಯಲ್ಲಿಟ್ಟು ಅದನ್ನು ಮಾತ್ರ ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟಿದ್ದಳು. ಇನ್ನು ಆ ಪಟ್ಟದ ಗೊಂಬೆಗೆ ಆಕೆ ವಹಿಸಿದ್ದ ಮುತುವರ್ಜಿ ಹೇಳತೀರದು. ಅದು ತನ್ನ ಸ್ನೇಹಿತರಿಂದ ಕಾಶಿಯಿಂದ ತರಿಸಿಕೊಂಡಿದ್ದು. ಘೇಟ್ ಗಂಧದ ಕೊರಡಿನಂತೆ ಬೆತ್ತಲಾಗಿದ್ದ ಆ ಗಂಡು, ಹೆಣ್ಣು ಗೊಂಬೆಗಳಿಗೆ ಪೇಪರ್‌ನಲ್ಲಿ ಜುಬ್ಬಾ ಪೈಜಾಮ ಹೊಲೆದು ಜೋಡಿಸಿಟ್ಟಿದ್ದಳು.

ಗೊಂಬೆ ಬಾಗಿನಕ್ಕೆ ಸುಬ್ಬರಾಯ ತನ್ನ ಇಬ್ಬರು ಗೆಳೆಯರೊಂದಿಗೆ ಹೋಗುತ್ತಿದ್ದ. ತಾನು ಹುಟ್ಟಿ ಬೆಳೆದ ಊರಿನ ವಠಾರದಲ್ಲಿ, ಪಕ್ಕದ ರಸ್ತೆಯಲ್ಲಿ ನಾನಾ ನಮೂನೆಯ ಗೊಂಬೆಗಳನ್ನು ಇಡುತ್ತಿದ್ದರು. ಗೊಂಬೆ ಬಾಗಿನ ಕೊಡುವಾಗ ಮನೆಯವರು ಹಾಡು ಕೇಳುವುದು ರೂಢಿ. ಆಗ ಈ ಮೂವರು ಹುಡುಗರು ಹೇಳುತ್ತಿದ್ದುದು ಪುಟಾಣಿ ಏಜೆಂಟ್ 1,2,3... ಸಿಂಹದ ಮರಿಗಳು ನಾವು.

ಬಾಗಿನ ತೆಗೆದುಕೊಳ್ಳುವುದರ ಜತೆಗೆ ಹೋದ ಮನೆಯಲ್ಲಿ ಇಟ್ಟಿರುತ್ತಿದ್ದ ವಿವಿಧ ನಮೂನೆಯ ಗೊಂಬೆಗಳ ಬಗ್ಗೆ ತನ್ನ ಅಮ್ಮನಿಗೆ ವರದಿ ಒಪ್ಪಿಸುತ್ತಿದ್ದ. ಮಾರನೆಗೆ ಆ ಗೊಂಬೆಗಳ ತಲಾಶ್‌ಗೆ ಅಮ್ಮ ತೊಡಗುತ್ತಿದ್ದಳು.

ಹೀಗೆ ಮನೆಯಲ್ಲಿ ಗೊಂಬೆಗಳ ಸಾಲು ಬೆಳೆಯುತ್ತಲೇ ಹೋಯಿತು. ಕಾಲಾನುಕ್ರಮದಲ್ಲಿ ಕೆಲ ಗೊಂಬೆಗಳು ಒಡೆದು ಹೋದರೆ ಮತ್ತೆ ಕೆಲವು ಅವರಿವರಿಗೆ ಕೊಟ್ಟು ಕಳೆಯಲಾಗಿತ್ತು. ಆದರೆ ಸುಬ್ಬರಾಯ ತುಂಬಾ ಇಷ್ಟಪಟ್ಟಿದ್ದ ಬುದ್ಧನ ಗೊಂಬೆಯನ್ನು ಮಾತ್ರ ಮನೆಯ ವರಾಂಡದಲ್ಲಿ ಗೂಟಕ್ಕೆ ಸಿಗಿಸಿದ್ದ.

ಸುಬ್ಬರಾಯ ಮತ್ತು ಆತನ ಅಮ್ಮನಿಗೆ ಗೊಂಬೆ ಖರೀದಿಯಲ್ಲಿ ಎಂತಹದ್ದೋ ಸುಖ ಸಿಗುತ್ತಿತ್ತು. ಆಗ ಸುಬ್ಬರಾಯ ಇನ್ನೂ ಚಿಕ್ಕವನು. ಯಾವುದೋ ಹರಿಕೆ ತೀರಿಸಲು ಕುಟುಂಬದವರೊಂದಿಗೆ ತಿರುಪತಿಗೆ ಹೋಗಿದ್ದ. ಆಗಷ್ಟೇ ಇಂದಿರಾಗಾಂಧಿಯನ್ನು ಅರೆಸ್ಟ್ ಮಾಡಲಾಗಿತ್ತು. ಆಕೆ ಅರೆಸ್ಟ್ ಆದ ಸುದ್ದಿ ತಿಳಿದೊಡನೆ ಆ ಊರೆಂಬೋ ಊರು ದಳ್ಳುರಿಗೆ ಒಳಗಾಗಿತ್ತು. ಯಾರು ಸಿಕ್ಕಿದರೂ ಹೊಡಿ ಬಡಿ.

ಇದ್ಯಾವ ಗೋಜಿಗೂ ತಲೆ ಕೆಡಿಸಿಕೊಳ್ಳದ ಸುಬ್ಬರಾಯ ಮತ್ತು ಆತನ ಅಮ್ಮ ಗೊಂಬೆ ಖರೀದಿಯಲ್ಲಿ ತೊಡಗಿದ್ದರು. ಅತ್ತ ದಳ್ಳುರಿ ಜೋರಾಗುತ್ತಿದ್ದಂತೆ ಸುಬ್ಬರಾಯನ ಕುಟುಂಬ ಊರಿಗೆ ಹೊರಡಲು ಅಣಿಯಾಯಿತು.

ಮನೆಯ ವರಾಂಡದಲ್ಲಿ ನೇತು ಹಾಕಿದ್ದ ಗೊಂಬೆ ಮಾತ್ರ ಸುಬ್ಬರಾಯನ ಅತ್ಯಂತ ಆಪ್ತ ಗೆಳೆಯನಂತಿತ್ತು. ಮೊದಲು ಆ ವರಾಂಡದಲ್ಲಿ ವಿವಿಧ ನಮೂನೆಯ ದೇವರ ಪಟಗಳನ್ನು ದೇವರ ಮನೆಯಲ್ಲಷ್ಟೇ ನೇತು ಹಾಕಲು ಸುಬ್ಬರಾಯ ಅಮ್ಮನಿಗೆ ಹೇಗೋ ಒಪ್ಪಿಸಿದ್ದ.

ಗೊಂಬೆಯೆಡೆ ಸುಬ್ಬರಾಯ ಆಕರ್ಷಿತನಾಗಲು ಹಲವಾರು ಕಾರಣಗಳಿದ್ದವು. ಅವನು ಚಿಕ್ಕವನಿದ್ದಾಗ ಅಮ್ಮ ಈತನನ್ನು ತೊಡೆ ಮೇಲೆ ಮಲಗಿಸಿಕೊಂಡು ಚಂದ್ರನ ಚಿತ್ರಗಳನ್ನು ತೋರಿಸುತ್ತಿದ್ದಳು. ಚಂದ್ರನನ್ನೇ ಸೀಳಿಕೊಂಡು ರಥ ಓಡಿಸುತ್ತಿರುವ ದೇವತೆಗಳ ಚಿತ್ರ. ರಾಮನೆಡೆ ತನ್ನ ಭಕ್ತಿ ತೋರಲು ಎದೆಯನ್ನು ಸೀಳಿದ ಹನುಮನ ಚಿತ್ರ. ಹೀಗೆ ಚಿತ್ರಗಳನ್ನು ಅಮ್ಮ ಕಟ್ಟಿಕೊಡುತ್ತಿದ್ದರಿಂದ ಸಹಜವಾಗಿ ಅವೆಲ್ಲವನ್ನು ಪಡೆಯಲು ಉತ್ಸುಕನಾಗಿದ್ದ.



ಆಗ ಇವನಿಗೆ ಸಿಕ್ಕಿದ್ದು ಗೊಂಬೆಗಳು. ತನ್ನ ಪುಟ್ಟ ಎದೆಗೆ ಆನಿಸಿಕೊಂಡು ಎಂತದ್ದೋ ಖುಷಿ ಅನುಭವಿಸಿದ್ದ. ಮಣ್ಣಿನ ಗೊಂಬೆ, ಮರದ ಗೊಂಬೆ, ಗಾಜಿನ ಗೊಂಬೆ ಕೊನೆಗೆ ಪ್ಲಾಸ್ಟರ್ ಆಫ್ ಪ್ಯಾರೀಸ್‌ನಿಂದ ತಯಾರಿಸಿದ ಗೊಂಬೆಗಳ ಖರೀದಿಯಲ್ಲಿ ಅಮ್ಮನಷ್ಟೇ ಉತ್ಸಾಹದಿಂದ ತೊಡಗಿದ.

ಮನೆಯಲ್ಲಿ ಗೊಂಬೆಗಳ ಸಾಲು ಬೆಳೆಯುತ್ತಾ ಹೋಯಿತು. ಅಟ್ಟದಲ್ಲಿ, ಪುಸ್ತಕದ ಕಪಾಟಿನಲ್ಲಿ, ದೇವರ ಕೋಣೆಯಲ್ಲಿ ಹೀಗೆ ಎಲ್ಲೆಂದರಲ್ಲಿ ಜಾಗ ಸಿಕ್ಕಿದಲ್ಲೆಲ್ಲಾ ಗೊಂಬೆಗಳನ್ನು ಹೊಟ್ಟುತ್ತಿದ್ದರು.

ಗೊಂಬೆಗಳ ಬಗ್ಗೆ ಇಷ್ಟೊಂದು ಮುತುವರ್ಜಿ ವಹಿಸಿದ್ದ ಸುಬ್ಬರಾಯನ ಕುಟುಂಬ ಇದ್ದಕ್ಕಿದ್ದಂತೆ ಗೊಂಬೆಗಳ ಬಗ್ಗೆ ಆಕರ್ಷಣೆ ಕಳೆದುಕೊಳ್ಳಲು ಪ್ರಮುಖ ಕಾರಣ ಆ ಅಮೆರಿಕನ್ ಲೇಡಿ ಗೊಂಬೆ.

ಅಮ್ಮನ ತಾಯಿಯಿಂದ ಬಂದ ಬಳುವಳಿಯಾದ ಈ ಗೊಂಬೆ ಬಗ್ಗೆ ಎಲ್ಲರಿಗೂ ಕುತೂಹಲವಿತ್ತು. ಮೈಸೂರಿನ ಅರಮನೆಯಲ್ಲೂ ಕೂಡ ಇಂಥ ಗೊಂಬೆ ಇರಲಿಲ್ಲ, ಒಂದು ವೇಳೆ ಮೈಸೂರಿನ ಮಹಾರಾಜರಿಗೆ ಈ ಗೊಂಬೆ ಬಗ್ಗೆ ಗೊತ್ತಿದ್ದರೆ ಯಾವುದಾದರೂ ಒಂದು ಪ್ರಾಂತ್ಯವನ್ನು ನಿಮಗೇ ಬಿಟ್ಟುಕೊಟ್ಟು ಗೊಂಬೆ ಪಡೆಯುತ್ತಿದ್ದರು ಎಂಬ ಮಾತುಗಳನ್ನು ಅಕ್ಕಪಕ್ಕದ ಮನೆಯವರು, ಆ ಅಮೆರಿಕನ್ ಲೇಡಿ ಗೊಂಬೆ ಬಗ್ಗೆ ಗಾಢವಾದ ಪ್ರೀತಿ ಇಟ್ಟುಕೊಂಡಿದ್ದವರು ಹೇಳುತ್ತಿದ್ದರು.

ಕಬ್ಬಿಣದ ಟ್ರಂಕಿನಲ್ಲಿದ್ದ ಈ ಗೊಂಬೆಯನ್ನು ಸುಬ್ಬರಾಯ, ಆತನ ತಂಗಿ ಹಾಗೂ ಅಮ್ಮ ದಿನಕ್ಕೊಮ್ಮೆ ತೆಗೆದು ಒರೆಸಿ ಹಾಗೇ ಇಡುತ್ತಿದ್ದುದು ವಾಡಿಕೆ. ನವರಾತ್ರಿಯಲ್ಲಿ ಮನೆಯಲ್ಲಿ ಗೊಂಬೆಗಳ ಸಾಲಿನ ಜತೆಗೆ ಪೇರಿಸಿಟ್ಟಿದ್ದ ಈ ಅಮೆರಿಕನ್ ಲೇಡಿ ಗೊಂಬೆಯನ್ನು ಮಾತ್ರ ಕಣ್ಣಲ್ಲಿ ಕಣ್ಣಿಟ್ಟು ನೋಡಿಕೊಳ್ಳುತ್ತಿದ್ದರು.

ಅಂಥ ಅಮೆರಿಕನ್ ಲೇಡಿ ಗೊಂಬೆ ಇದ್ದಕ್ಕಿದ್ದಂತೆ ಮಾಯವಾಯಿತು. ಅವರಿವರನ್ನು ಆ ಗೊಂಬೆ ಬಗ್ಗೆ ಕೇಳಲಾಯಿತು. ಯಾರೋ ಲಪಟಾಯಿಸಿರಬೇಕು ಎಂದರು ಕೆಲವರು. ಮತ್ತೆ ಕೆಲವರು ಯಾರಿಗೋ ಕೊಟ್ಟಿರಬೇಕು ಎಂದರು. ಅದನ್ನು ಯಾರಾದರೂ ಕದ್ದರೋ ಅಥವಾ ಮನೆಯವರೇ ಯಾರಿಗಾದರೂ ದಾನವಾಗಿ ಕೊಟ್ಟುಬಿಟ್ಟರೋ ಯಾವುದೂ ಸ್ಪಷ್ಟವಾಗಿರಲಿಲ್ಲ. ಅಥವಾ ತಾನೇ ಆ ಗೊಂಬೆಯನ್ನು ಕೊಟ್ಟಿದ್ದು ಎಂದು ಹೇಳಿ ಮನೆಯವರಲ್ಲಿ ಬಚಾವಾಗಲು ಆಗದೇ ಸುಮ್ಮನೇ ಇದ್ದಿರಬಹುದು. ಅಂತೂ ಜತನದಿಂದ ಕಾಪಾಡಿಕೊಂಡು ಬಂದಿದ್ದ ಆ ಗೊಂಬೆ ಮಾತ್ರ ಕಾಣೆಯಾಗಿದ್ದು ಸುಬ್ಬರಾಯನಾದಿಯಾಗಿ ಮನೆಯವರಿಗೆಲ್ಲಾ ಗೊಂಬೆಗಳ ಬಗ್ಗೆ ನಿರ್ಲಕ್ಷ್ಯ ಬೆಳೆಯುವಂತೆ ಮಾಡಿತು.

ಗೊಂಬೆ ಕಳೆದು ಹೋಗಿ ಒಂದು ವಾರವಾದರೂ ಅದರ ಬಗ್ಗೆ ಯೋಚಿಸುವುದನ್ನು ಬಿಡದೇ ಇದ್ದುದರಿಂದ ಸುಬ್ಬರಾಯನಿಗೆ ಕನಸಿನಲ್ಲಿ ಆ ಅಮೆರಿಕನ್ ಲೇಡಿ ಗೊಂಬೆ ಕಾಣಿಸಿಕೊಳ್ಳುತ್ತಿತ್ತು. ಒಮ್ಮೆ ಕನಸಿನಲ್ಲಿ ಆ ಗೊಂಬೆ ಮನೆ ಮುಂದಿದ್ದ ತೆಂಗಿನ ಮರದ ಬುಡದಲ್ಲಿ

ಮಣ್ಣಲ್ಲಿ ಹೂತಿರುವುದಾಗಿ ಕನಸು ಬಿದ್ದರೆ ಮತ್ತೆ ಕೆಲವು ಸಲ ಕೊಟ್ಟಿಗೆ ಮನೆ ಮುಂಭಾಗದಲ್ಲಿರುವ ಸಂದ ಬಟ್ಟಲು ಗಿಡದಲ್ಲಿ ಹೂತಿಡಲಾಗಿದೆ ಎಂಬುದಾಗಿ ಕನಸು ಬೀಳುತ್ತಿತ್ತು. ಬೆಳಗ್ಗೆ ಎದ್ದವನೇ ಅಲ್ಲೆಲ್ಲಾ ತಲಾಶ್ ನಡೆಸಿ ನಿರಾಶೆಯಾಗಿ ವಾಪಸಾಗಿದ್ದು ಉಂಟು.

ಮೊನ್ನೆ ಸ್ಪಿರಿಚುಯಲ್ ಯಾತ್ರೆ ಮುಗಿಸಿಕೊಂಡು ತನ್ನ ಗೆಳೆಯರೊಂದಿಗೆ ಬಾರ್‌ಗೆ ಹೊಕ್ಕಿದ್ದ ಸುಬ್ಬರಾಯ ಆ ಪಟ್ಟದ ಗೊಂಬೆಯ ಗುಂಗಿನಿಂದಲೇ ಹೊರಗೆ ಬಂದ. ಹೊರಗೆ ಚರ್ಮವನ್ನು ಕರಗಿಸುವಂತಹ ಚಳಿಯಲ್ಲಿ ರೂಮ್ ಕಡೆ ಹೆಜ್ಜೆ ಹಾಕುತ್ತಿದ್ದಾಗ ಬಾರ್‌ನಲ್ಲಿದ್ದ ಪಟ್ಟದ ಗೊಂಬೆಯನ್ನು ಹೋಲುವಂತಹ ಊನಗೊಂಡ ಪುಟ್ಟ ಮರದ ಗೊಂಬೆಯೊಂದು ರಸ್ತೆ ಬದಿಯಲ್ಲಿ ಅನಾಥವಾಗಿ ಬಿದ್ದಿತ್ತು.

ಬಾರ್‌ನಲ್ಲಿ ನೋಡಿದ ಗೊಂಬೆ, ರಸ್ತೆ ಬದಿಯಲ್ಲಿ ಅನಾಥವಾಗಿ ಬಿದ್ದಿದ್ದ ಗೊಂಬೆಯನ್ನು ಕಂಡೊಡನೆ ಅವನಿಗೆ ನೆನಪಾಗಿದ್ದು ಅಮೆರಿಕನ್ ಗೊಂಬೆ. ಏರಿದ ಅಮಲಿನಲ್ಲಿ ಆ ಗೊಂಬೆ ತನಗೆ ಚಳಿಯಾಗುತ್ತಿದೆ ಎಂದು, ಇವತ್ತು ನಿನ್ನ ರೂಮಿಗೆ ಕರೆದುಕೊಂಡು ಹೋಗು ಎಂದು ಹಂಬಲಿಸುವಂತಿತ್ತು.

ಹಿಂದು ಮುಂದು ನೋಡದೆ ಆ ಗೊಂಬೆಯನ್ನು ತಂದು ತಾನು ಮಲಗುವ ಕೋಣೆಯಲ್ಲಿಟ್ಟಿದ್ದ. ಸಕ್ಕರೆ ನಿದ್ರೆಯಿಂದ ಹೊರ ಬಂದಾಗ ಸುಬ್ಬರಾಯನ ಕಣ್ಣಿಗೆ ಕಂಡದ್ದು ಈ ಊನಗೊಂಡ ಮರದ ಗೊಂಬೆ.

ಏಕೋ ಅಂದು ಎದ್ದವನಿಗೆ ಎಂಥದ್ದೋ ಕಿರಿಕಿರಿ. ಊನಗೊಂಡ ಆ ಗೊಂಬೆಯನ್ನು ತಂದರೆ ಏನಾದರೂ ಕೇಡಾಗುತ್ತದೆ ಎಂದು ಅಮ್ಮ ಹೇಳಿದ ಮಾತುಗಳು ಕಿವಿ ತುಂಬಾ ಸುತ್ತುತ್ತಿತ್ತು. ಈ ಎಲ್ಲಾ ಕಿರಿಕಿರಿ ಅನುಭವಿಸುತ್ತಾ ತಲೆ ಮೇಲೆ ಕೈಯಿಟ್ಟುಕೊಂಡು ಕೂತಿದ್ದಾಗ ರೂಮ್ ಪಾರ್ಟನರ್ ಜಗ್ಗಿ ಬಂದು ಊನಗೊಂಡ ಮರದ ಗೊಂಬೆಯ ಬಗ್ಗೆ ವಿಚಾರಿಸಿದ.

ಈ ಊನಗೊಂಡ ಗೊಂಬೆ ರೂಂಗೆ ಬಂದ ರೀತಿಯನ್ನು ವಿವರಿಸುತ್ತಾ ಹೋದಂತೆ ಜಗ್ಗಿ ಇದು ಲಿಯನಾರ್ಡೋ ಡಾ ವಿಂಚಿಯ ಮೊನಾಲಿಸಾ ಥರ ಎಂದು ಒಮ್ಮೆ, ಮತ್ತೊಮ್ಮೆ ವ್ಯಾನಗೋನ ಪೈಂಟಿಂಗ್ ಥರ ಇದೆ ಎಂದು ಹೇಳಿ ತನ್ನ ರೀಡಿಂಗ್ ಟೇಬಲ್ ಮೇಲಿಟ್ಟ.

ತಾನೊಬ್ಬ ವೈಚಾರಿಕ, ನಿರೀಶ್ವರವಾದಿ ಎಂದೆಲ್ಲಾ ಹೇಳಿಕೊಂಡು ತಿರುಗುತ್ತಿದ್ದ ಸುಬ್ಬರಾಯನಿಗೆ ಅಮಲಿನಲ್ಲಿ ತಂದಿದ್ದ ಗೊಂಬೆಯನ್ನು ಮನೆಯಿಂದ ಆಚೆ ಸಾಗಿಸುವುದು ಹೇಗೆ ಎಂಬುದೇ ಯೋಚನೆಯಾಗಿತ್ತು. ಊನಗೊಂಡ ಗೊಂಬೆಯನ್ನು ಮನೆಗೆ ತಂದರೆ ಕೇಡಾಗುತ್ತೆ ಎಂದು ಅಮ್ಮ ಹೇಳಿದ ಮಾತುಗಳು ಯಾಕೋ ಬಾಧಿಸುತ್ತಿತ್ತು. ಇದೇ ಕಾರಣ ಹೇಳಿ ಅದನ್ನು ಆಚೆಗೆ ಎಸೆದರೆ ತನ್ನನ್ನು ವೈಚಾರಿಕ ಎಂದುಕೊಂಡಿದ್ದ ಜಗ್ಗಿ ಪೊಳ್ಳು ನಿರೀಶ್ವರವಾದಿ ಎಂದು ಕಿಚಾಯಿಸುವುದಿಲ್ಲವೇ ಎಂಬುದು ಸುಬ್ಬರಾಯನ ಆತಂಕಕ್ಕೆ ಕಾರಣವಾಗಿತ್ತು.

ಈ ನಡುವೆ ಅಕ್ಕಪಕ್ಕದ ರೂಮಿನವರು, ಜಗ್ಗಿಯ ಗೆಳೆಯರು, ಅಷ್ಟೇಕೆ ಸುಬ್ಬರಾಯನ ಗೆಳೆಯರು ಕೂಡಾ ಊನಗೊಂಡ ಆ ಗೊಂಬೆಯನ್ನು ದೊಡ್ಡ ಕಲಾಕೃತಿ ಎಂಬಂತೆ ಪ್ರತಿಷ್ಠಾಪಿಸಿದ್ದರು.

ಸುಬ್ಬರಾಯನ ಉದ್ವೇಗ ಹೆಚ್ಚುತ್ತಾ ಹೋಯಿತು. ಅದೊಂದು ಭಾನುವಾರ ಜಗ್ಗಿ ತನ್ನ ಊರಿಗೆ ಹೋಗಿದ್ದ. ಮನೆಯಲ್ಲಿ ಒಬ್ಬನೇ ಇದ್ದ ಸುಬ್ಬರಾಯ ಆ ಗೊಂಬೆಯನ್ನು ಬಿಸಾಡುವುದೆಂದು ನಿರ್ಧರಿಸಿದ್ದ. ಕ್ಷಣಾರ್ಧದಲ್ಲೇ ಜಗ್ಗಿ ಬಂದು ಗೊಂಬೆ ಎಲ್ಲಿ ಎಂದರೆ ಏನೆಂದು ಹೇಳುವುದು. ಅಷ್ಟಕ್ಕೂ ಆ ಗೊಂಬೆ ಅವನ ಆಸ್ತಿಯೇನಲ್ಲಾ, ಆದರೆ ಬಿಸಾಡಿದ್ದೇಕೆಂದು ಕೇಳಿದರೆ ಏನೆಂದು ಹೇಳುವುದು ಎಂಬ ಆತಂಕ ಶುರುವಾಯಿತು. ಗೊಂಬೆಯನ್ನು ಎಸೆದು ಆತಂಕ ನೀಗಿಸಿಕೊಳ್ಳಬೇಕೆಂದು ನಿಶ್ಚಯಿಸಿದಾಗ ರೂಮ್‌ನ ಬಾಗಿಲು ತಟ್ಟಿದ ಸದ್ದಾಯಿತು. ಹೋಗಿ ಬಾಗಿಲು ತೆರೆದಾಗ ಪುಟ್ಟಿ ಬಂದಿದ್ದಳು. ಈಕೆ ಸುಬ್ಬರಾಯನ ರೂಮ್ ಓನರ್ ಶ್ರೀಪಾದ್ ಅವರ ಮಗಳು. ಪ್ರತಿ ದಿನ ರೂಂಗೆ ಬಂದು ಮುದ್ದು ಮುದ್ದಾಗಿ ಮಾತಾಡಿ ಹೋಗುತ್ತಿದ್ದ ಈಕೆಯನ್ನು ಕಂಡರೆ ಸುಬ್ಬರಾಯನಿಗೂ ಹಾಗೂ ಜಗ್ಗಿಗೂ ಎಂತದ್ದೋ ಪ್ರೀತಿ. ಕೆಲಸ ಮುಗಿಸಿಕೊಂಡು ಬರುವಾಗ ಆಕೆಗೆ ಬಿಸ್ಕತ್, ಐಸ್‌ಕ್ರೀಂ ಎಲ್ಲವನ್ನು ತಂದು ಕೊಡುತ್ತಿದ್ದರು. ಒಮ್ಮೆ ಆಕೆಯ ಹುಟ್ಟುಹಬ್ಬಕ್ಕೆ ಸುಬ್ಬರಾಯ ಪುಟ್ಟಿಗೆ ಫ್ಯಾನ್ಸಿ ಗೊಂಬೆಯನ್ನು ತಂದುಕೊಟ್ಟಿದ್ದ. ಪುಟ್ಟಿ ಎಷ್ಟು ಜತನದಿಂದ ಕಾಪಾಡಿಕೊಂಡಿದ್ದಳು ಎಂದರೆ ತನ್ನಲ್ಲಿರುವ ಎಲ್ಲಾ ಗೊಂಬೆಗಳನ್ನು ತನ್ನ ತಮ್ಮನಿಗೆ ಆಡಲು ಕೊಟ್ಟಿದ್ದಳು. ಆದರೆ ಆ ಫ್ಯಾನ್ಸಿ ಗೊಂಬೆಯನ್ನು ಮಾತ್ರ ಬಿಲ್‌ಕುಲ್ ಕೊಡುತ್ತಿರಲಿಲ್ಲ.

ತಾನು ಮಲಗುವಾಗ ಕೂಡ ತನ್ನ ಪಕ್ಕ ಆ ಫ್ಯಾನ್ಸಿ ಗೊಂಬೆಯನ್ನು ಮಲಗಿಸಿಕೊಳ್ಳುತ್ತಿದ್ದಳು. ಅವತ್ತು ರೂಮ್‌ಗೆ ಬಂದ ಪುಟ್ಟಿಗೆ ಮೊದಲು ಕಂಡಿದ್ದು ಈ

ಊನಗೊಂಡ ಗೊಂಬೆ. ಆ ಗೊಂಬೆಯನ್ನು ನೋಡುತ್ತಿದ್ದಂತೆ 'ಅಂಕಲ್ ನೀವು ನನಗೆ ಕೊಟ್ಟ ಫ್ಯಾನ್ಸಿ ಗೊಂಬೆಗಿಂತ ಇದೇ ಚೆನ್ನಾಗಿದೆ. ಇದನ್ನು ನನಗೆ ಕೊಡಿ' ಎಂದು ದುಂಬಾಲು ಬಿದ್ದಳು. ಸುಬ್ಬರಾಯನಿಗಂತೂ ಒಂದು ದೊಡ್ಡ ಸಮಸ್ಯೆ ಬಗೆಹರಿದಂತಾಯಿತು ಎಂದು ಫ್ಯಾನ್ಸಿ ಗೊಂಬೆ ನಿನ್ನಲ್ಲೇ ಇರಲಿ. ಇದನ್ನು ಬೇಕಾದರೂ ತೆಗೆದುಕೊಂಡು ಹೋಗು ಎಂದು ಅವಳ ಕೈಯಲ್ಲಿ ಆ ಊನಗೊಂಡ ಗೊಂಬೆ ಕೊಟ್ಟು ಕಳುಹಿಸಿದ.

ಒಂದು ದೊಡ್ಡ ಹೊರೆ ಇಳಿದಂತಾಯಿತು ಎಂದು ಖುಷಿಗೊಂಡ ಸುಬ್ಬರಾಯ ಅಂಗಾತ ಮಲಗಿ ಗೊಂಬೆ ಇಲ್ಲದ್ದನ್ನು ನೆನೆದು ಖುಷಿಗೊಂಡ. ತಾನೊಬ್ಬ ಅವೈಚಾರಿಕ ಎಂಬುದನ್ನು ಜಗ್ಗನಿಂದ ಕೇಳಿಸಿಕೊಳ್ಳುವುದು ತಪ್ಪಿತಲ್ಲ ಎಂದು ಹರ್ಷಗೊಂಡ.

ಗೊಂಬೆ ರೂಮ್‌ಗೆ ಬಂದಾಗಿನಿಂದ ಆಗುತ್ತಿದ್ದ ಕಿರಿಕಿರಿಯಿಂದ ಸುಬ್ಬರಾಯ ಏನನ್ನೂ ಓದಿರಲಿಲ್ಲ. ತಾನು ಇಷ್ಟಪಡುವ ಮಾಸ್ತಿಯನ್ನು ಓದಿರಲಿಲ್ಲ. ಅಷ್ಟೇಕೆ ದೂರದ ಗೆಳೆಯ ಕಳುಹಿಸಿದ್ದ ಬೋದಿಲೇರ್‌ನ ಪಾಪದ ಹೂಗಳನ್ನು ಕೂಡಾ ಓದಿರಲಿಲ್ಲ. ನಾಳೆಯಿಂದ ಯಾವ ಪುಸ್ತಕವನ್ನು ಓದಬೇಕೆಂದು ಪಟ್ಟಿ ಹಾಕಿ ಎಂದಿನಂತೆ ಸ್ಪಿರಿಚುಯಲ್ ಯಾತ್ರೆ ಮುಗಿಸಿಕೊಂಡು ಬಾರ್‌ಗೆ ಹೊಕ್ಕ.

ತನ್ನ ನೆಚ್ಚಿನ ವಿಸ್ಕಿಯನ್ನು ಹೀರುತ್ತಿದ್ದಾಗ ಏಕೋ ಮತ್ತೆ ಗೊಂಬೆಯೇ ನೆನಪಾಗುತ್ತಿತ್ತು. ಮರೆಯಬೇಕೆಂಬುದನ್ನು ಯೋಚಿಸುವವನು ಪೊಳ್ಳು ಎಂದು ತನ್ನ ನೆಚ್ಚಿನ ಲೇಖಕನೊಬ್ಬನ ಮಾತು ನೆನೆದು ಬೇರೆಡೆಗೆ ಮನಸ್ಸನ್ನು ಹರಿಯಲುಬಿಟ್ಟ.

ರಸ್ತೆ ಬದಿಯಲ್ಲಿ ಸಿಕ್ಕಿದ್ದ ಗೊಂಬೆಯನ್ನು ರೂಮ್‌ಗೆ ತಂದಿದ್ದ ಬಗ್ಗೆ, ಅದು ಕೊಡುತ್ತಿರುವ ಕಿರಿಕಿರಿ ಬಗ್ಗೆ, ಅದನ್ನು ಸಾಗ ಹಾಕಲು ಪಟ್ಟ ಕಷ್ಟದ ಬಗ್ಗೆ ಅಮ್ಮನಿಗೆ ಹೇಳಬೇಕೆಂದುಕೊಂಡ. ಆದರೆ ಅಮ್ಮನಲ್ಲೂ ಕೂಡಾ ತಾನೊಬ್ಬ ವೈಚಾರಿಕ ಎಂದು ಹಣೆಪಟ್ಟಿಕಟ್ಟಿಕೊಂಡಿದ್ದರಿಂದ ಆಕೆಯಲ್ಲಿ ಹೇಳುವುದಕ್ಕೆ ಸಂಕೋಚವಾಗಿ ಸುಮ್ಮನಾಗಿದ್ದ.

ವಿಸ್ಕಿ ಕುಡಿಯುತ್ತಾ ತಾನು ಬರೆಯಬೇಕೆಂದಿದ್ದ ಕಥೆಯ ಬಗ್ಗೆ ಯೋಚಿಸುತ್ತಿದ್ದವನಿಗೆ ಗೊಂಬೆಯೇ ಕಣ್ಣೆದುರಿಗೆ ಬಂದಂತಾಗಿ ಬಾರ್‌ನಿಂದ ಬೇಗನೇ ಎದ್ದು ರೂಮ್‌ಗೆ ಹೋಗಿ ಮಲಗಿದ.

ಬೆಳಗ್ಗೆ ಕಣ್ಣು ಬಿಟ್ಟೊಡನೆ ಮತ್ತೆ ಆ ಊನಗೊಂಡ ಗೊಂಬೆಯೇ ತನ್ನನ್ನು ಕೆಕ್ಕರಿಸಿಕೊಂಡು ನೋಡುತ್ತಿತ್ತು. ನಿಜಕ್ಕೂ ಸುಬ್ಬರಾಯ ಕುಸಿದು ಹೋದ. ತಾನು ಮರೆಯಬೇಕೆಂದು, ತನ್ನಿಂದ ದೂರವಾಗಬೇಕೆಂದು ಬಯಸುತ್ತಿದ್ದ ಗೊಂಬೆ ಮತ್ತೆ ತನ್ನೆಡೆಗೆ ಬರುತ್ತಿರುವುದನ್ನು ನೆನೆದು ಮತ್ತಷ್ಟು ಆತಂಕಿತನಾದ.

ರೂಮ್ ಪಾರ್ಟ್‌ನರ್ ಜಗ್ಗಿಯನ್ನು ಬಲವಂತವಾಗಿ ಎಬ್ಬಿಸಿ ಈ ಗೊಂಬೆಯನ್ನು ಮತ್ತೆ ತಂದವರು ಯಾರು ಎಂದು ಗದರಿದ್ದ. ಅದಕ್ಕೆ ಜಗ್ಗಿ 'ಪುಟ್ಟಿಯೇ ಇದನ್ನು ಅಂಕಲ್‌ಗೆ ಕೊಟ್ಟು ಬಿಡಿ' ಎಂದು ತಂದಿಟ್ಟು ಹೋದಳು ಎಂದ.

ನೀನ್ಯಾಕೆ ಅದನ್ನು ಇಸ್ಕೊಂಡೆ. ನಾನು ಅವಳಿಗೆ ಕೊಡಲಿಕ್ಕೆ ತಂದಿದ್ದು. ಬೆಳಗ್ಗೆ ಬಂದರೆ ಅವಳಿಗೆ ಇದನ್ನು ಕೊಡು ಎಂದ. ಅದಕ್ಕೆ ಜಗ್ಗಿ 'ಅಲ್ಲಪ್ಪ ನಿರೀಶ್ವರವಾದಿ, ಅವರಮ್ಮ ಇದನ್ನು ಮನೆಯಲ್ಲಿಟ್ಟುಕೊಂಡರೆ ಕೇಡು ಅಂತ ಹೇಳಿ ಇದನ್ನು ಕೊಟ್ಟಿದ್ದು. ಮೊದಲು ಊರ ಹೊರಗೆ ಬಿಸಾಡು ಎಂದು ಬೇರೆ ಹೇಳಿ ಹೋಗಿದ್ದಾರೆ' ಎಂದ.

ಥೂ ನಿಜಕ್ಕೂ ಮೂಢನಂಬಿಕೆ ಮೂರ್ಖರು. ಏನಾದರೂ ಕೇಡು ಮಾಡಲಿಕ್ಕೆ ಈ ಗೊಂಬೆಗೆ ಜೀವವಿದೆಯೆ. ವಿಜ್ಞಾನ ಎಷ್ಟು ಮುಂದುವರೆದಿದೆ ಎಂದರೆ ಕಲ್ಲುದೇವರಲ್ಲೂ ಪ್ರೋಟ್ರಾನ್, ನ್ಯೂಟ್ರಾನ್ ಇದೆ ಎಂದು ನಮ್ಮ ವಿಜ್ಞಾನಿಗಳು ಹೇಳುತ್ತಿರುವ ಹೊತ್ತಲ್ಲಿ ಈ ಗೊಂಬೆ, ಯಃಕಶ್ಚಿತ್ ಮರದ ಗೊಂಬೆಯನ್ನು ಮನೆಯಲ್ಲಿಟ್ಟುಕೊಂಡರೆ ಕೇಡು ಎಂದು ಹೇಳುವ ಇವರ ಬುದ್ಧಿಗೆ ಏನನ್ನೋಣ ಎಂದು ಹೊರ ನಡೆದ.

ಮಾರನೆ ದಿನ ಜಗ್ಗಿ ಆ ಊನಗೊಂಡ ಗೊಂಬೆಗೆ ಪಾಲಿಷ್ ಮಾಡಿಸಿ ತನ್ನ ಪುಟ್ಟ ಟೀವಿ ಮೇಲಿಟ್ಟಿದ್ದ. ಕಲಾಕೃತಿಗಳನ್ನು ಮನೆಯಲ್ಲಿಟ್ಟುಕೊಂಡರೆ ಬುದ್ಧಿಜೀವಿಗಳು ಎಂಬ ಭ್ರಮೆ ಆತನದು. ಹಾಗಾಗಿ ಜಗ್ಗಿ ಅದನ್ನು ಗೊಂಬೆ ಎಂದು ಭಾವಿಸಿರಲಿಲ್ಲ. ಅದನ್ನು ಮರದ ಒಂದು ಕಲಾ ಕೃತಿ ಎಂದೇ ಭಾವಿಸಿದ್ದಂತಿತ್ತು.

ಸುಬ್ಬರಾಯನಿಗೂ ಕಲಾಕೃತಿಗಳೆಂದರೆ ಅಚ್ಚುಮೆಚ್ಚು. ಇತ್ತೀಚೆಗಷ್ಟೇ ಹಿನ್ನೀರು ಪ್ರದೇಶಕ್ಕೆ ಹೋಗಿದ್ದಾಗ ಕಾಡಿನಲ್ಲಿ ದೊರೆತಿದ್ದ ವಿವಿಧ ಆಕೃತಿಯ ಮರದ ತುಂಡುಗಳನ್ನು ತನ್ನ ಪುಟ್ಟ ರೂಮಿನಲ್ಲಿ ಜಟ್ಟಿದ್ದ.

ಜಿಂಕೆಯ ಮುಖದ ಕೊರಡು, ಆನೆ ಮುಖದ ಕೊರಡು ಹೀಗೆ ಥರೇವಾರಿ ಮರದ ಕೊರಡುಗಳು ಆ ಕ್ಷಣಕ್ಕೆ ಅವನಿಗೆ ಕಲಾಕೃತಿ ಎಂದು ಕಾಣಿಸಿದ್ದರಿಂದ ಎಲ್ಲವನ್ನು ಓರಣವಾಗಿ ಪೇರಿಸಿಟ್ಟಿದ್ದ. ಆದರೆ ಗೊಂಬೆ ಕಥೆಯೇ ಬೇರೆ. ಅದು ಊನಗೊಂಡಿದ್ದು.

ಅವತ್ತಿಡೀ ಬರೀ ಕೆಟ್ಟ ಕನಸು. ಗೊಂಬೆ ಸೃಷ್ಟಿಸುತ್ತಿರುವ ಆತಂಕದಿಂದ ತನ್ನಲ್ಲಾಗುತ್ತಿರುವ ಗೊಂದಲದಿಂದ ಚಡಪಡಿಸುತ್ತಿದ್ದ ಸುಬ್ಬರಾಯ ಒಮ್ಮೆ ಬೆಳಗ್ಗೆ ಎದ್ದವನೇ ಗೊಂಬೆಯನ್ನು ಹೊಳೆಗೆ ಎಸೆದುಬಿಡಬೇಕೆಂದು ನಿರ್ಧರಿಸಿದಾಗ ನೆನಪಾದವನು ಅನಂತ.

ದೇವಸ್ಥಾನದಲ್ಲಿ ಪೂಜಾರಿಯಾಗಿದ್ದ ತನ್ನ ಬಾಲ್ಯಕಾಲದ ಗೆಳೆಯ ಅನಂತ ಎಷ್ಟೋ ಬಾರಿ ಸುಬ್ಬರಾಯನಿಗೆ ದೇವರ ಅಸ್ತಿತ್ವದ ಬಗ್ಗೆ ಹೇಳುತ್ತಲೇ ಇದ್ದ. ಏಕಾದಶಿಯಂದು ತಿಂಡಿ ಮಾತ್ರ ಸೇವಿಸಿದರೆ ಒಳ್ಳೆಯದಾಗುತ್ತೆ ಮುಂತಾಗಿ ಹೇಳಿದರೂ ಗೊಡ್ಡು ಸಂಪ್ರದಾಯದ ಬಗ್ಗೆ ಸುಬ್ಬರಾಯ ಉಗಿದು ಬಂದಿದ್ದ. ಆದರೆ ಅನಂತ ಮಾತ್ರ ಇವರಿಂದ ರೋಸಿ ಹೋಗದೆ ದೇವರಿಗೆ ನೈವೇದ್ಯ ಮಾಡಿದ ನಂತರ ಸೀಕರಣೆ ಕೊಡುವುದನ್ನು ಮಾತ್ರ ತಪ್ಪಿಸುತ್ತಿರಲಿಲ್ಲ.

ಗೊಂಬೆಯ ಆಗಮನದಿಂದ ಆತಂಕಗೊಂಡಿದ್ದ ಸುಬ್ಬರಾಯ ನೇರ ತನ್ನೂರಿಗೆ ಬಂದವನೇ ಅನಂತನನ್ನು ಕಂಡ. ದೇವರಿಗೆ ಮಂಗಳಾರತಿ ಮಾಡುತ್ತಾ ತನ್ನ ಲೋಕದಲ್ಲಿ ನೆಮ್ಮದಿಯಾಗಿದ್ದ ಅನಂತನನ್ನು ಕಂಡು ಮೊದಲ ಬಾರಿಗೆ ಸುಬ್ಬರಾಯನಿಗೆ ಅಸೂಯೆಯಾಯಿತು.

ತನಗೆ ಕಷ್ಟ ಬಂದರೆ ದೇವರ ಮುಂದೆ ಹೇಳಿಕೊಳ್ಳುತ್ತೇನೆ. ಆತನೊಬ್ಬನೇ ತಮ್ಮ ಕಷ್ಟಗಳನ್ನು ತಾಳ್ಮೆಯಿಂದ ಕೇಳಿಸಿಕೊಳ್ಳುವುದು ಮುಂತಾಗಿ ಅನಂತ ಹೇಳಿದ. ತಾನು ಬಂದ ಬಗ್ಗೆ, ತಾನು ಎದುರಿಸುತ್ತಿರುವ ಸಮಸ್ಯೆಯನ್ನು ಹೇಳಿದ. ತಾನೊಬ್ಬ ಲೋಕಜ್ಞಾನಿಯಂತ ಈಗಾದರೂ ಗೊತ್ತಾಯಿತಾ ಎಂದು ಅರ್ಧ ಮೆಚ್ಚುಗೆಯಿಂದ ಅರ್ಧ ಹುಂಬುತನದಿಂದ ಬರುವ ಶನಿವಾರ ಬೆಳಗ್ಗೆ ಎದ್ದು ಆ ಗೊಂಬೆಯನ್ನು ಎಕ್ಕದ ಗಿಡದ ಬುಡದಲ್ಲಿ ಬಿಸಾಡು ಎಂದ.

ಏಕೋ ಮೊದಲ ಬಾರಿ ತಾನು ಸೋಲಿನಲ್ಲಿ ಗೆಲುವು ಕಾಣುತ್ತಿದ್ದೇನೆಂದು ಅಂದುಕೊಂಡ. ರೂಮ್ ಪಾರ್ಟ್‌ನರ್ ಜಗ್ಗಿ ಬಂದು ಗೊಂಬೆ ಎಲ್ಲೋ ಎಂದು ಕೇಳಿದೊಡನೆ ಒರಟಾಗಿ 'ಬಿಸಾಡಿದೆ' ಎಂದು ಅವನು ಮತ್ತೆ ಪ್ರಶ್ನೆ ಕೇಳದಂತೆ ನೋಡಿಕೊಂಡ.

ಮೊದಲ ಬಾರಿಗೆ ಎಂತದ್ದೋ ನೆಮ್ಮದಿ ಸಿಕ್ಕಂತಾಯಿತು. ತನಗೆ ಇಷ್ಟವಾದ ಪುಸ್ತಕಗಳು, ಉದ್ಯೋಗ, ಒಂದಿಷ್ಟು ಬರವಣಿಗೆ ಮಾಡಿಕೊಂಡು ಯಾವ ಗೋಜಿಗೂ ಹೋಗದೆ ತನ್ನ ಪಾಡಿಗೆ ಇರಬೇಕೆಂದುಕೊಂಡು ಎಂದಿನಂತೆ ಸ್ಪಿರಿಚುಯಲ್ ಯಾತ್ರೆ ಮುಗಿಸಿಕೊಂಡು ಬಾರ್‌ಗೆ ಹೊಕ್ಕ.

ಅವತ್ತು ಬಾರ್‌ನಲ್ಲಿ ಗೊಂಬೆ ನೆನಪಾಗಲಿಲ್ಲ, ಅನಂತ ನೆನಪಾಗುತ್ತಿದ್ದ. ಬಿಲ್ ಕೊಟ್ಟು ಬಾರ್‌ನಿಂದ ಹೊರಬಿದ್ದ.

ನಾಳೆಯ ಬೆಳಗು ನಿಜಕ್ಕೂ ಹೊಸ ಬೆಳಗಾಗುತ್ತದೆ ಎಂದು ಸಂಜಿ ಕಣ್ಣು ಬಿಟ್ಟಾಗ ಆತನಿಗೆ ಕಂಡಿದ್ದು ಕಳೆದುಹೋಗಿದ್ದ ಅಮೆರಿಕನ್ ಲೇಡಿ ಗೊಂಬೆ. ತನ್ನ ಕೆನ್ನೆಗೆ ದೃಷ್ಟಿ ಬೊಟ್ಟು ಇಟ್ಟುಕೊಂಡು ನಗುತ್ತಿದ್ದ ಆ ಗಾಜಿನ ಗೊಂಬೆಯನ್ನು ಕಂಡು ಹತಾಶನಾದಾಗ ದೂರದಲ್ಲಿದ್ದ ಬಾಲ್ಯ ಗೆಳೆಯ ಅನಂತ ನಗುತ್ತಿದ್ದಂತೆ ಭಾಸವಾಗಿ ಮಗ್ಗಲು ಮುರಿದ.

●

## 'ನಗ್ನೋರ್ ಸೀಟು' ನಿಮಗಾಗಿ ಕಾದಿದೆ

ನವುರಾದ ಹಾಸ್ಯ ಬರಹಗಳನ್ನೂ 'ಹಂಗಾಮ'ದಲ್ಲಿ ಪ್ರಕಟಿಸಲಿದ್ದೇವೆ. ಫುಲ್‌ಸ್ಕೇಪ್ ಐದು ಪುಟಗಳ ಮಿತಿಯಲ್ಲಿ ನಿಮ್ಮ ಬರಹಗಳಿರಲಿ. ಹಾಗೆಯೇ ತಮಾಷೆ ಪ್ರಸಂಗಗಳು, ಅಪರೂಪದ ಜೋಕ್‌ಗಳು ನಿಮ್ಮ ಸಂಗ್ರಹದಲ್ಲಿದ್ದರೆ ಅವನ್ನೂ ನಮಗೆ ಕಳುಹಿಸಿಕೊಡಿ. ಈಗಾಗಲೇ ಕೇಳಿ ಕೇಳಿ ಸವಕಲಾದಂಥ ಜೋಕ್‌ಗಳು ಬೇಡ.



ಪ್ರಸ್ತಾಪ

❑ ಸಿಪಾರಿಕ

# 'ಪ್ರಗತಿ'ಯೊಂದರ (ದುರಂತ) ಕಥನ

ಮತ್ತೆ ಮಳೆ ಹೊಯ್ಯುತಿದೆ, ಎಲ್ಲ ನೆನಪಾಗುತಿದೆ...,

**ಜುಲೈ 19.**

ಆರು ವರ್ಷಗಳ ಹಿಂದೆ ಇದೇ ದಿನ 'ಪ್ರಗತಿ'ಗಾಗಿ ತ್ಯಾಗ ಮಾಡಿದ ಸಾವಿರಾರು ಜನರ ಮೇಲೆ ರಾಜ್ಯ ಪೊಲೀಸ್ ಪಡೆ ರಣಹದ್ದಿನಂತೆ ಎರಗಿತ್ತು. ಅಸಹಾಯಕರನ್ನು ಕುಕ್ಕಿಕುಕ್ಕಿ ಹಿಂಸಿಸಿತ್ತು.

ಆ ಹಿಂಸೆಯ ದುಃಸ್ವಪ್ನ ಇಂದಿಗೂ ಅಲ್ಲಿಯ ಜನರನ್ನು ಬೆಚ್ಚಿ ಬೀಳಿಸುತ್ತದೆ.

'ಪ್ರಗತಿ'ಯ ರಥ ಹಾದು ಹೋಗುವಾಗ ಅದರ ರಕ್ಕಸ ಚಕ್ರಗಳಡಿಯಲ್ಲಿ ಸಿಕ್ಕು ನಲುಗಿದ ಮಂದಿಯ ದುರಂತ ಕಥೆ ಇದು.



**ಜುಲೈ 19, 1998.**

ರಾಜ್ಯದ ಇತಿಹಾಸದಲ್ಲೊಂದು ಕರಾಳ ದಿನ.

ಸತತವಾಗಿ 94 ದಿನಗಳ ಕಾಲ ತಮ್ಮ ಬದುಕಿನ ಹಕ್ಕಿಗಾಗಿ ಭಿಕ್ಷೆ ಬೇಡಿದ ಬಾಗೂರು-ನವಿಲೆ ಸುರಂಗದ ಸಂತ್ರಸ್ತ ಮಂದಿಯ ಮೇಲೆ ಆಗಿನ ದೇವೇಗೌಡ ನೇತೃತ್ವದ ಜನತಾದಳ ಸರ್ಕಾರ ಪೊಲೀಸರನ್ನು 'ಛೂ' ಬಿಟ್ಟಿತ್ತು.

ಈ ಪೊಲೀಸರು ಹೆಂಗಸರು, ಮಕ್ಕಳು, ಮದುಕರು, ತದುಕರು ಎಂದು ನೋಡದೆ ಜನರನ್ನು ಅಟ್ಟಾಡಿಸಿಕೊಂಡು ಬಡಿದರು. ಮನೆಗಳಿಗೆ ನುಗ್ಗಿ ಲೂಟಿ ಮಾಡಿದರು.

ಈ ಹಿಂಸಾಕಾಂಡ ಸತತವಾಗಿ ಮೂರು ದಿನ ನಡೆಯಿತು.

ಹನ್ನೆರಡು ಹಳ್ಳಿಗಳು ಸ್ಮಶಾನ ರೂಪಿಯಾಯಿತು. ಕತ್ತಲ ಮೌನದಲ್ಲಿ ಕೇಳಿಸಿದ್ದು ನೋವಿನ ಬಿಕ್ಕಳಿಕೆ. ನರಳಿಕೆ.

ಈ ಹಿಂಸೆಗೆ ರಾಜ್ಯದ ಜನತೆ ಬೆಚ್ಚಿಬಿತ್ತು. ರಾಷ್ಟ್ರೀಯ ಮಾನವ ಆಯೋಗ ಈ ಹಿಂಸೆಯ ಸ್ವರೂಪಕ್ಕೆ ದಿಗ್ಭ್ರಮೆ ವ್ಯಕ್ತಪಡಿಸಿತು.

ಹಿಂಸೆಯ ಘಟನೆ ದೂರದ ದೆಹಲಿಯ ಸಂಸತ್ ಭವನದಲ್ಲಿಯೂ ಪ್ರತಿಧ್ವನಿಸಿತು. ಈ ಹಿಂಸೆಗೆ ಕಾರಣವಾದರೂ ಏನು? ಕಾರಣ ಹುಡುಕಿ ಹೊರಟಾಗ ಕಾಣುವ ಚಿತ್ರ ಇದು.

ದೇವರಾಜ್ ಅರಸ್ ಮುಖ್ಯಮಂತ್ರಿಯಾಗಿದ್ದ ಕಾಲ ಅದು.

ಹಾಸನ ಸಮೀಪದ ಗೊರೂರಿನ ಹೇಮಾವತಿ ಜಲಾಶಯದಿಂದ ತುಮಕೂರು ಮತ್ತು ಮಂಡ್ಯ ಜಿಲ್ಲೆಗಳಿಗೆ ನೀರು ಹರಿಸಲು ಚನ್ನರಾಯ ಪಟ್ಟಣದ ಬಾಗೂರು-ನವಿಲೆ ಮೂಲಕ ಹಾದು ಹೋಗುವ ಸುರಂಗವೊಂದನ್ನು ಕೊರೆಯಲಾಯಿತು. ಇದು ಏಷಿಯಾದ ಎರಡನೇ ದೊಡ್ಡ ಸುರಂಗ ಎಂಬ ಹೆಗ್ಗಳಿಕೆಯದು (ಅಭಿವೃದ್ಧಿ ಪಥದ ಈ ಸುರಂಗದಲ್ಲಿ 12ಕ್ಕೂ ಹೆಚ್ಚು ಹಳ್ಳಿಗಳ ಜನರ ಬದುಕಿನ ಸಮಾಧಿಯಾದದ್ದು ಇಲ್ಲಿ 'ಅಮುಖ್ಯ').

ಸುಮಾರು 9.76 ಕಿಮೀ ಉದ್ದ, 5.4 ಮೀಟರ್ ವ್ಯಾಸದ ಈ ಸುರಂಗಕ್ಕೆ ಶಿಲಾನ್ಯಾಸ ಮಾಡಿದಾಗಲೇ ದೂರದರ್ಶಿತ್ವಕ್ಕೆ ಹೆಸರಾದ ದೇವರಾಜ ಅರಸು ಅಂತರ್ಜಲ ಬತ್ತಿ ಹೋಗುವ ಭೀತಿ ವ್ಯಕ್ತಪಡಿಸಿದ್ದರು. ಬಾಳೆಕುಂದ್ರಿಯಂಥ ನೀರಾವರಿ ತಜ್ಞರು ಈ ಯೋಜನೆ 43 ಹಳ್ಳಿಗಳ ಬದುಕಿಗೆ ಸಂಚಕಾರ ತರುತ್ತದೆ ಎಂದು ಎಚ್ಚರಿಸಿ ಈ ಯೋಜನೆಯನ್ನು ವಿರೋಧಿಸಿದ್ದರು.

ಒಂದೆಡೆ ಹಿರಿಸಾವೆ ಮತ್ತೊಂದೆಡೆ ದಂಡಿಗಾನಹಳ್ಳಿ ಹೋಬಳಿಯ ಮೇಲೆ ನೀರು ಸಾಗಿಸುವ ಸಾಧ್ಯತೆಯಿದ್ದರೂ ಅಲ್ಲಿನ ಇಬ್ಬರು ಪ್ರಮುಖ ರಾಜಕಾರಣಿಗಳು ಹಾಗೂ ಅವರ ಸಂಬಂಧಿಗಳ ಭೂಮಿ ಉಳಿಸಲು ಈ ಯೋಜನೆಯ ದಿಕ್ಕನ್ನೇ ಬದಲಿಸಿ ಬಾಗೂರು-ನವಿಲೆ ಎಂಬ ಹಸಿರುಕ್ಕಿಸುವ 'ತೆಂಗಿನ'ನಾಡಿನ ಮೇಲೆ ಸುರಂಗ ಕೊಂಡೊಯ್ಯುವ 'ರಾಜಕೀಯ' ನಿರ್ಧಾರವೊಂದನ್ನು ತೆಗೆದುಕೊಂಡಿದ್ದು ವಿಪರ್ಯಾಸ.

ಕೊನೆಗೂ ಈ ಸುರಂಗದ ಕೆಲಸ ಆರಂಭವಾಯಿತು. ಸುರಂಗ ಕೊರೆಯುವಾಗ ಕೆಲವು ಬಲಿಗಳು ಆಯ್ತು. ಕೆಲವು ಬಹಿರಂಗವಾದರೆ ಮತ್ತೆ ಕೆಲವು ಸುರಂಗದಾಳದಲ್ಲೇ ಹೂತು ಹೋದವು.

ಹದಿನೈದು ವರ್ಷಗಳ ಕಾಲ ಸತತವಾಗಿ ನಡೆದ ಸುರಂಗದ ಕೆಲಸ 1991ರಲ್ಲಿ ಅಂತ್ಯವಾಗುವ ವೇಳೆಗೆ ಮೊದಲೇ ಗೊತ್ತಿದ್ದ ಪರಿಣಾಮ ಪ್ರಕಟವಾಗತೊಡಗಿತು. ಅಂತರ್ಜಲ ಗಣನೀಯವಾಗಿ ಕುಸಿಯಿತು. ವರ್ಷಕ್ಕೆ 15000 ತೆಂಗಿನಕಾಯಿ ಪಡೆಯುತ್ತಿದ್ದ ರೈತ 2000 ತೆಂಗಿನಕಾಯಿ ಪಡೆಯುವಂತಾಯಿತು. ಕೆರೆಗಳು ಒಣಗಿ ಬಯಲಾದವು. ತೆಂಗಿನ ಕಾಯಿಯ ಗಾತ್ರ ಗಿನ್ನೆಸ್ ದಾಖಲೆಗೆ ಸೇರುವಷ್ಟು ಕುಗ್ಗಿತು. ಫಸಲನ್ನು ಕಳೆದುಕೊಂಡ ರೈತನ ಬದುಕು ನಾಶವಾಯಿತು. ಜಮೀನು ಕೃಷಿ ಮಾಡಿಕೊಂಡು ನೆಮ್ಮದಿಯಿಂದ ಇದ್ದ ರೈತ ಕೂಲಿ ಕೆಲಸಕ್ಕೆ ಹೋಗುವಂಥ ಸ್ಥಿತಿ ನಿರ್ಮಾಣವಾಯಿತು.



ಆಗ ಅಲ್ಲಿಯ ಜನ ಎಚ್ಚೆತ್ತುಕೊಂಡರು.

ಎಚ್ಚೆತ್ತುಕೊಂಡ ರೀತಿ ಕೂಡ ವಿಶಿಷ್ಟ. ಸ್ಥಳೀಯ ಶಿವಾನಂದ ಎಂಬ ಹುಡುಗ ಆಗಷ್ಟೇ ಪತ್ರಿಕೋದ್ಯಮಕ್ಕೆ ಕಾಲಿಟ್ಟಿದ್ದ. ತಾನು ಕಂಡ ಈ ಪ್ರಗತಿಯ ದುರಂತವನ್ನು ದಾಖಲಿಸಿದ. ತಾನೇ ಹಳ್ಳಿಹಳ್ಳಿಗಳಿಗೆ ತಿರುಗಿ ಜನರಿಗೆ ಈ ಬಗ್ಗೆ ತಿಳಿಸಿದ. ಆಗ ರೂಪುಗೊಂಡಿದ್ದು 'ಬಾಗೂರು-ನವಿಲೆ ರೈತ ಹಿತರಕ್ಷಣಾ ಸಮಿತಿ'. ಜನ ತಮಗಾದ ಅನ್ಯಾಯಕ್ಕೆ ಪ್ರತಿಭಟಿಸಲು ಮುಂದಾದರು. ಧರಣಿ ನಡೆಸಲು ಆರಂಭಿಸಿದರು. ಸುತ್ತಮುತ್ತಲಿನ 46 ಹಳ್ಳಿಗಳಲ್ಲಿ ಪ್ರತಿಭಟನೆಯ ಕಾವು ಕಾಣಿಸಿಕೊಂಡಿತು. ರೈತ ಸಂಘ ಕೂಡ ಈ ಹೋರಾಟಕ್ಕೆ ಹೆಗಲು ನೀಡಿತು. ಭಾರತೀಯ ಕಮ್ಯುನಿಸ್ಟ್ ಪಕ್ಷ ಬೆಂಬಲ ಸೂಚಿಸಿತು. ಅಖಿಲ ಭಾರತ ಕಿಸಾನ್ ಸಭಾ ಹೋರಾಟದ ನೇತೃತ್ವ ವಹಿಸಿತು.



ಗೋಪಾಲ್ ಮುಂದಾಳತ್ವ ವಹಿಸಿದರು.

ಈ ವೇಳೆಗೆ ಎಚ್ಚೆತ್ತುಕೊಂಡ ಸರ್ಕಾರ ಕೃಷಿ ಮತ್ತು ತೋಟಗಾರಿಕಾ ಇಲಾಖೆಗೆ ನಷ್ಟವನ್ನು ಅಂದಾಜಿಸಲು ಸೂಚನೆ ನೀಡಿತು. ಎರಡೂ ಇಲಾಖೆಗಳ ತಜ್ಞರು ನಷ್ಟವನ್ನು 26.5 ಕೋಟಿ ಎಂದು ಅಂದಾಜಿಸಿದರು.

ತಮಗಾದ ನಷ್ಟಕ್ಕೆ ಈ 26.5 ಕೋಟಿ ಪರಿಹಾರ ಹಾಗೂ ಸುರಂಗದಿಂದ 2 ಏತನೀರಾವರಿ ಯೋಜನೆಗಾಗಿ ಹೋರಾಟಗಾರರು ಪಟ್ಟು ಹಿಡಿದರು. ಪರಿಹಾರ ನೀಡಲು ದೇವೇಗೌಡ ನೇತೃತ್ವದ ಸರ್ಕಾರ ಒಪ್ಪಲಿಲ್ಲ. 'ಪಟ್ಟು' ಬಲವಾಯಿತು. ಒಂದರ್ಥದಲ್ಲಿ ಹೋರಾಟಗಾರರ 'ಕೊರಳಿನ ಉರುಳಾಯಿತು!'

ಸುರಂಗದ ದ್ವಾರದಲ್ಲಿ ನೀರು ತಡೆದು ಪ್ರತಿಭಟನೆಕಾರರು ಚಳವಳಿ ಆರಂಭಿಸಿದರು. ಅತ್ತ ನೀರು ಬಿಡುವಂತೆ ಮಂಡ್ಯ-ತುಮಕೂರಿನ ಜನರು ಚಳವಳಿ ಆರಂಭಿಸಿದರು. ದೇವೇಗೌಡರ ಮೇಲೆ ಒತ್ತಡ ಹೆಚ್ಚಿದಾಗ, 'ಅನಿವಾರ್ಯ'ವಾಗಿ ಅವರು ಪೊಲೀಸ್ ಕಾರ್ಯಾಚರಣೆಗೆ 'ಅನುಮತಿ' ನೀಡಿದರು.

★

ಜುಲೈ 19, 20, 21ರಂದು ಆಗ ನಡೆದದ್ದು ಪೊಲೀಸ್ ದೌರ್ಜನ್ಯದ ರುದ್ರನರ್ತನ.

ಕೇಳಿಸಿದ್ದು ನೋವಿನ ಆಕ್ರಂದನ.

ಇಂಥ ಸಂದರ್ಭವನ್ನು ಯಾವ ರಾಜಕೀಯ ಪಕ್ಷ ತಾನೇ ಕಡೆಗಣಿಸುತ್ತೆ. ಕಾಂಗ್ರೆಸ್ ಪಕ್ಷ ಇದನ್ನು ರಾಜಕಾರಣಕ್ಕೆ ಬಳಸಿಕೊಂಡಿತು.

ಮಲ್ಲಿಕಾರ್ಜುನ ಖರ್ಗೆ, ಎಚ್.ಕೆ.ಪಾಟೀಲ್ ಆಗ ಮೇಲ್ಮನೆ-ಕೆಳಮನೆಯಲ್ಲಿ ವಿರೋಧ ಪಕ್ಷದ ನಾಯಕರು. ಇಬ್ಬರೂ ಧಾವಿಸಿ ಬಂದರು. ದೌರ್ಜನ್ಯ ಖಂಡಿಸಿದರು. ಸರ್ಕಾರ ಪರಿಹಾರ ನೀಡಲೇಬೇಕೆಂದರು.

ಆಗ-ಎಸ್.ಎಂ.ಕೃಷ್ಣ ರಾಜ್ಯ ಸಭಾ ಸದಸ್ಯರು. ಗೌಡರನ್ನು ಹಣಿಯಲು ಅವರು ಈ ದೌರ್ಜನ್ಯವನ್ನು ಪ್ರಸ್ತಾಪಿಸಿ ತಮ್ಮ ರೈತರ ಪರ ಕಾಳಜಿ ಮೆರೆದರು.

ಮೊಯಿಲಿ ಬಂದು ದುಃಖಿಸಿದರು. ಪರಿಹಾರಕ್ಕಾಗಿ ಆಗ್ರಹಿಸಿದರು. ಆಗ ಸ್ಥಳೀಯ ಜನತಾದಳದ ಶಾಸಕ ಪುಟ್ಟೇಗೌಡ ಮೌನ ವಹಿಸಿದರು.

ಆಗಲೇ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ ಆಗಮಿಸಿತು. ಈ ದೌರ್ಜನ್ಯವನ್ನು 'ತೀವ್ರವಾದ' ಶಬ್ದಗಳಲ್ಲಿ ಖಂಡಿಸಿತು.

ಒಟ್ಟಾರೆಯಾಗಿ ಮೊಸಳೆ ಕಣ್ಣೀರು ಧಾರಾಕಾರವಾಗಿ ಬಾಗೂರು-ನವಿಲೆ ಸುರಂಗದಲ್ಲಿ ಹರಿಯಿತು.

★

ಸುರಂಗದ ಪರಿಣಾಮ ಜನರ ಮೇಲೆ ಕಾಣಿಸಿಕೊಂಡಂತೆ ದೌರ್ಜನ್ಯದ ಪರಿಣಾಮ ಸರ್ಕಾರದ ಮೇಲೆ ಕಾಣಿಸಿಕೊಂಡಂತೆ 1999ರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಜನತಾದಳವನ್ನು ನಿರ್ನಾಮ ಮಾಡಿತು. ದೇವೆಗೌಡರು ಹಾಗೂ ಅವರ ಪುತ್ರ ಸಚಿವ ರೇವಣ್ಣ ಸೋತರು.

ಚಳವಳಿಗೆ ಬೆಂಬಲ ನೀಡಿದ ಪುಟ್ಟಸ್ವಾಮಿ ಗೌಡ ಸಂಸದರಾದರೆ ಎಚ್.ಸಿ.ಶ್ರೀಕಂಠಯ್ಯ ಈ ಭಾಗದ ಶಾಸಕರಾಗಿ, 'ಕಂದಾಯ' ಸಚಿವರೂ ಆಗಿಹೋದರು. ಕಾಂಗ್ರೆಸ್ ಪಕ್ಷ ಜನತಾದಳ ಮಾಡಿದ ಗಾಯಕ್ಕೆ ಮುಲಾಮು ಹಚ್ಚುತ್ತದೆ ಎಂಬ ಜನರ ಭಾವನೆ ಸುಳ್ಳಾಯಿತು.

ಕಾಂಗ್ರೆಸ್ ನಾಯಕರು ಮಾಡಿದ ವಾಗ್ದಾನಗಳು ಗಾಳಿಗೆ ತೂರಿದವು. ಪೊಲೀಸರು ಚಳವಳಿಗಾರರ ಮೇಲೆ ಹಾಕಿದ ಕೇಸುಗಳು ವಾಪಸ್ ಆದದ್ದು ಬಿಟ್ಟರು ಬೇರೇನೂ ಲಾಭವಾಗಲಿಲ್ಲ.

ಈ ವೇಳೆಗೆ ಚಳವಳಿ ನೇತೃತ್ವ ವಹಿಸಿದ್ದ ನಾಯಕರು 'ಪಲಾಯನ'ವಾದಕ್ಕೆ ಶರಣಾಗಿದ್ದರು. ಅಲ್ಲಿನ ಹಳ್ಳಿಗಳಲ್ಲಿ ಚಳವಳಿಯೊಂದರ ಸೋಲು ಸ್ಥಾಯಿಭಾವ ಎನ್ನುವಂತಾಯಿತು.

ಕಾಂಗ್ರೆಸ್-ಜನತಾದಳಗಳೆರಡೂ ಬಾಗೂರು-ನವಿಲೆ ಚಳವಳಿಯನ್ನು ಪಗಡೆಯಾಟದ ಕಾಯಿಗಳಂತೆ ಬಳಸಿಕೊಂಡವು.

★

ಭರವಸೆಗಳಿಗೆ ಮೂಕಸಾಕ್ಷಿಯಂತೆ ಏತ ನೀರಾವರಿಗಳು ಅರ್ಧದಲ್ಲೆ ನಿಂತಿವೆ. ಅಂತರ್ಜಲ ಕುಸಿತ ಮುಂದುವರಿದಿದೆ. ಮತ್ತೆ ಹೋರಾಟ ನಡೆಸಲು ಕಸುವು ರೈತರಲ್ಲಿ ಇಲ್ಲ. ಹೋರಾಟವೆಂದರೆ ಬೆಚ್ಚಿ ಬೀಳುತ್ತಾರೆ. ತಮ್ಮನ್ನು ನಡುನೀರಿನಲ್ಲಿ ಕೈಬಿಟ್ಟರೆಂದು ನಾಯಕರನ್ನು ಶಪಿಸುತ್ತಾರೆ.

ಭರವಸೆಗಳು ಈಡೇರದ ನೋವಿಗಿಂತ, ಪರಿಹಾರ ದಕ್ಕದೇ ಇರುವುದಕ್ಕಿಂತ ಹೋರಾಟವೊಂದು ವಿಫಲವಾದ ನೋವು ಅಲ್ಲಿ ಮಡುಗಟ್ಟಿದೆ.

ಈಗ ತಮ್ಮನ್ನು ಮೋಸ ಮಾಡಿದ ಕಾಂಗ್ರೆಸ್-ಜನತಾದಳ ಪಕ್ಷಗಳೆರಡೂ ಕೂಡಿ ರಾಜ್ಯದಲ್ಲಿ ಸರ್ಕಾರ ಮಾಡಿ, 'ರೈತಪರ' ಕಾಳಜಿಗಳನ್ನು ಪುಂಖಾನುಪುಂಖ

ವಾಗಿ ಹೊಮ್ಮಿಸುತ್ತಿರುವುದು ಕೂಡ ಅವರನ್ನು ಬೆಚ್ಚಿಬೀಳಿಸಿಲ್ಲ.

ಅವರಲ್ಲಿ ಕಾಣುವುದು ತಿರಸ್ಕಾರದ ಕಿರುನಗೆ ಮಾತ್ರ.

ಅದು ಕೆಲವರಿಗೆ ಮಾತ್ರ ಅರ್ಥವಾಗುವಂಥದ್ದು.

ಮರೆತ ಸಂಗತಿ: ದೌರ್ಜನ್ಯಕ್ಕೆ ಮೂಕಸಾಕ್ಷಿಯಾಗಿದ್ದ ಪುಟ್ಟೇಗೌಡ ಈಗ ಮತ್ತೆ ಈ ಭಾಗದ ಶಾಸಕರಾಗಿದ್ದಾರೆ.

ಚಳವಳಿಯನ್ನು ದಮನ ಮಾಡಿದ ಸಚಿವ ರೇವಣ್ಣ ಈಗ ಬಡ್ತಿ ದೊರೆತು ಲೋಕೋಪಯೋಗಿ-ಇಂಧನ ಸಚಿವರಾಗಿದ್ದಾರೆ.

ದೇವೇಗೌಡರು ರೈತರಿಗಾಗಿ ಕಂಡಕಂಡಲ್ಲಿ ಕಣ್ಣೀರು ಹರಿಸುತ್ತಿದ್ದಾರೆ.

★★★

'ಪ್ರಗತಿ'ಯೊಂದರ ಈ ದುರಂತ ಕಥನ ಯಾರನ್ನು ಕಾಡಿತೋ, ಯಾರನ್ನು ಬಿಟ್ಟಿತೋ ಗೊತ್ತಿಲ್ಲ. ಆದರೆ 'ಪ್ರಗತಿ'ಯ ಕಲ್ಪನೆಯ ಬಗ್ಗೆ 'ಭೂಮಿಗೀತ'ದಂಥ ವ್ಯಾಖ್ಯಾನ ಬರೆದ ಕೇಸರಿ ಹರವು ಅವರನ್ನು ಈ ದುರಂತ ಸೆಳೆದಿದೆ.

'ಭೂಮಿಗೀತ'ದ ಮುಂದುವರಿದ ಸೀಕ್ವೆಲ್ ಬಗ್ಗೆ ಯೋಚಿಸುತ್ತಿದ್ದ ಕೇಸರಿ ಹರವು ಈಗ ಈ ದುರಂತದ ಅಧ್ಯಾಯದಲ್ಲಿ ನಿರತರಾಗಿದ್ದಾರೆ. ದುರಂತದ ಕೇಂದ್ರ ಸ್ಥಾನವಾದ ಕಾಮನಾಯಕನಹಳ್ಳಿಯಲ್ಲಿ ನೆಲೆವೂರಿ ಕಳೆದ ಒಂದು ವರ್ಷದಿಂದ ತಪಸ್ಸಿಗೆ ಕೂತವರಂತೆ ಅಧ್ಯಯನ ಮಾಡುತ್ತಿದ್ದಾರೆ.


'ಭೂಮಿಗೀತ'ದ ನಿರ್ದೇಶಕ
ಕೇಸರಿ ಹರವು

ಅವರ ಮುಂದಿನ ಚಿತ್ರಕ್ಕೆ ಕಥಾ ಹಂದರವೊಂದು ರೂಪುಗೊಳ್ಳುತ್ತಿದೆ. ಜೊತೆಯಲ್ಲಿ ವಿಫಲವಾದ ಹೋರಾಟ, ಪ್ರಗತಿ ಇಲ್ಲಿನ ಜನರ ಮೇಲೆ ಮಾಡಿರುವ ಪರಿಣಾಮ, ಇಲ್ಲಿನ ಜನ ಆರ್ಥಿಕ, ಸಾಮಾಜಿಕ ಸ್ಥಿತಿಗತಿ-ಎಲ್ಲವನ್ನು ಕುರಿತು ಪುಸ್ತಕವೊಂದನ್ನು ಬರೆಯಲು ಕೇಸರಿ ಸಜ್ಜಾಗಿದ್ದಾರೆ.

ಈಗ ಅವರಿಗೆ ಈ ನೆಲದ ಪ್ರತಿ ಇಂಚೂ ಪರಿಚಿತ. ಎಲ್ಲದರಲ್ಲೂ ಅವರ ಮಿಡಿತ.

ಹಾಗಾಗೇ ಕಥೆ ಹುಡುಕಿಕೊಂಡು ಬಂದ ಇವರೇ ತಾವೇ ಒಂದು ಕಥೆಯಾಗಿಬಿಡುವ ಹಂತ ಮುಟ್ಟಿಬಿಟ್ಟಿದ್ದಾರೆ.

ಹೇಗೆ ಗೊತ್ತೇ?

ಕಾಮನಾಯಕನಹಳ್ಳಿಯಲ್ಲಿ ಒಂದು ಕೆರೆ ಇದೆ. ಈ ಕೆರೆಯ ಸಮಸ್ಯೆಯನ್ನು ಗಮನಿಸಿದರೆ ಅದು ಬಾಗೂರು-ನವಿಲೆ ಸುರಂಗದ 'ಮೈಕ್ರೋ' ಸ್ವರೂಪದಂತಿದೆ.

ಒಂದು ಕಾಲದಲ್ಲಿ ಎಂದೂ ಬತ್ತದ ಈ ಕೆರೆ ಈಗ ಬಟಾಬಯಲಾಗಿದೆ. ಅದರ ಸುತ್ತಲೂ ನಿರ್ಮಾಣವಾಗಿರುವ ಕಾಲುವೆಯೊಂದು ಕೆರೆಯ ಸಾವಿಗೆ ಕಾರಣವಾಗಿದೆ.

ಎತ್ತರದಿಂದ ಗುರುತ್ವಾಕರ್ಷಣೆಯಲ್ಲಿ ಹರಿದು ಕೆರೆಯಲ್ಲಿ ಲೀನವಾಗುತ್ತಿದ್ದ ನೀರು, ಈಗ ಕಾಲುವೆ ಸೇರಿ ಮತ್ತೆಲ್ಲೋ ಸಾಗುತ್ತದೆ. ಕೆರೆಯಿಂದಾಗಿ ಒಮ್ಮೆ ಹಸಿರಿನಿಂದ ನಗುತ್ತಿದ್ದ ತಂಪಾದ ಹವೆ ಇದ್ದ ಕಾಮನಾಯಕನಹಳ್ಳಿ ಇಂದು ಬೆಂಗಾಡಾಗಿದೆ.

ಈ ಸಮಸ್ಯೆಯನ್ನು ಹರವು ಕೈಗೆತ್ತಿಕೊಂಡಿದ್ದಾರೆ. ಕೆರೆಯ ಸಾವಿಗೆ ಕಾರಣವನ್ನು ಸ್ಥಳೀಯರಿಗೆ ಮನದಟ್ಟು ಮಾಡಿಕೊಟ್ಟು ಧ್ವನಿ ಎತ್ತುವಂತೆ ಮಾಡಿದ್ದಾರೆ.

ತಾವೇ ಸ್ವತಃ ಅಧಿಕಾರಿಗಳ ಕಚೇರಿಗೆ ಎಡತಾಕುತ್ತಾ ಸಮಸ್ಯೆಯನ್ನು ವಿವರಿಸುತ್ತಿದ್ದಾರೆ.

ಬಾಗೂರು-ನವಿಲೆ ಸುರಂಗದ ದುರಂತದ ನೆನಪು ಮಾಸುವ ಮುನ್ನವೇ ಅಂಥದ್ದೊಂದು ಮಿನಿ ಸಮಸ್ಯೆ ಎದುರಾದದ್ದು ಇಲ್ಲಿನ ರಾಜಕಾರಣಿಗಳಿಗೆ ಇಷ್ಟವಾದಂತೇನೂ ತೋರುವುದಿಲ್ಲ. ಮತ್ತೆ ಅಂದು ರಾಜಕಾರಣ ಮಾಡಿದ ಪುಟ್ಟೇಗೌಡರಿಗೆ ಅಸಮಾಧಾನವಾಗಿದೆ.

ಹರವು ಅವರನ್ನು ಬಾಗೂರು-ನವಿಲೆ ಚಳವಳಿಯಿಂದ 'ಪಲಾಯನ' ಮಾಡಿದ ನಾಯಕರಿಗೆ ಹೋಲಿಸುತ್ತಿದ್ದಾರೆ. ಎಂಥ ವಿಪರ್ಯಾಸ!

ಸ್ಥಳೀಯ ಜನರಿಗೂ ಇನ್ನೂ 1998ರ ಗಾಯ ಮಾಸಿಲ್ಲವಲ್ಲ.

●



ಭೂಪ ಕೇಳೆಂದ

# ಹಳೇ ಮಂಚದ ಕಥೆಯು

**ಅ**ವಳದೇ ಕನ್ನಡಿ, ಅವಳದೇ ಮಂಚದ ಒಂದು ಪ್ರತ್ಯೇಕ ಪ್ರಪಂಚದಂತೆ ಆ ಅಷ್ಟು ದೊಡ್ಡ ಮನೆಯಲ್ಲಿ ಅವಳ ಕೋಣೆ. ಊರಿನ ಎಲ್ಲಾ ಹುಡುಗಿಯರಿಂದ ಗೌಡನ ಮಗಳು ಬೇರೆಯೆಂಬಂತೆ ಮಾಡಿರುವಲ್ಲಿ ಇತರ ಹಲವಾರು ಸಂಗತಿಗಳೊಂದಿಗೆ ಆ ಕೋಣೆಯ ಪಾಲೂ ಬಹಳವೇ ಇದೆ. ತನ್ನ ಓರಗೆಯ ಎಲ್ಲಾ ಹುಡುಗಿಯರನ್ನು ಜಲಜಾಕ್ಷಿ ಆ ಕೋಣೆಯೊಳಗೆ ಸೇರಿಸುತ್ತಾಳಾದರೂ, ಅವರಾರೂ ಗೆಳತಿಯ ಸಲಿಗೆಯನ್ನು ಮುಂದು ಮಾಡುವುದಿಲ್ಲ. ಹೀಗಾಗೇ ಅವರೆಲ್ಲರ ಕಣ್ಣಲ್ಲಿ ಜಲಜಾಕ್ಷಿ ದೊಡ್ಡವಳೇ ಆಗಿ, ಅವಳ ಆ ಕೋಣೆ ಬೆಚ್ಚಗಿನ ಸ್ವಪ್ನಕ್ಕೆ ಅವರನ್ನೀಸುವಂತದ್ದಾಗಿ ಗಾಢವಾಗಿರುವುದು.

ಆ ಕೋಣೆ ಎಂದ ತಕ್ಷಣ ಅದು ಒಂದೇ ಕೋಣೆಯಲ್ಲ. ಬಾಗಿಲು ತೆರೆದರೆ ಒಂದು, ಇನ್ನೊಂದು, ಮತ್ತೊಂದು ಎಂದು ಮೂರು ಕೋಣೆಗಳುಳ್ಳದ್ದಾಗಿ ಪ್ರತ್ಯೇಕ ಮನೆಯೇ ಎಂಬಂತಿರುವ ಅದನ್ನು ಕೋಣೆಯೆಂದೇ ಕರೆದುಕೊಂಡು ಬರಲಾಗಿದೆ. ಅದು ಜಲಜಾಕ್ಷಿಗಾಗಿ ಇರುವಂತದ್ದು ಎಂಬುದನ್ನು ಸೂಚಿಸಲಿಕ್ಕಾಗಿಯೇ ಅವಳ ಕೋಣೆ ಎಂದು ಎಂತದೋ ಒಂದು ಬಗೆಯ ಗೌರವ ಭಾವವನ್ನು ವಿನೀತ ಭಾವವನ್ನು ತೋರುವುದು ಗೌಡನ ಮನೆಯೊಳಗೆ ನಡೆದುಬಂದಿದೆ.

ಅವಳದೆಂಬುವ ಆ ಕೋಣೆಯ ಮುಂಬಾಗಿಲು ತೆರೆದು ಒಳಗೆ ಹೋದರೆ ನೇರ ಮುಖಕ್ಕೆ ಮುಖ ಕೊಟ್ಟು ಕರೆಯುವುದೇ ಅಷ್ಟೆತ್ತರದ ಕನ್ನಡಿ. ಈಗಷ್ಟೇ

ಅರಳಿದ್ದೆಂಬಂತಾ ಭಾಸದಲ್ಲಿ ಒಂದು ಕ್ಷಣ ಅವಿತ್ತಗೆಯುವಂತಹ ಜೀವಂತ ಹೂಚಿತ್ರಗಳನ್ನು ಬಿಡಿಸಿರುವ ಮರದ ಚೌಕಟ್ಟು ಆ ಕನ್ನಡಿಗೆ. ಗೌಡನ ಮನೆತನದಲ್ಲಿ ಲಾಗಾಯ್ತಿನಿಂದಲೂ ಉಳಿದುಕೊಂಡು ಬಂದಿರುವ ಆಸ್ತಿಯಾದ ಅದು ಜಲಜಾಕ್ಷಿಯ ಬೆಳವಣಿಗೆಯ ಪ್ರತಿ ಹಂತವನ್ನೂ ತನ್ನ ಕಣ್ಣಲ್ಲಿ ಹಿಡಿದಿದೆ. ನಾಲ್ಕು ತಲಗಳಿಗೆಯ ನಂತರ ಹುಟ್ಟಿದ ಆ ಹೆಣ್ಣುಮಗಳಿಗೆ ಎಷ್ಟೊಂದು ಅಕ್ಕರೆಯಿಂದ ಚೆಲುವನ್ನು ದಯಪಾಲಿಸಿ ಧನ್ಯಗೊಂಡಂತಿದೆ.

ಪುಟ್ಟ ಪೋರಿಯಾಗಿದ್ದಾಗ ಅಂಗಿಯನ್ನು ಸೀದಾ ಮೇಲೆತ್ತಿ ಬಾಯಿಗಿಟ್ಟು ಕಚ್ಚುತ್ತಿದ್ದ ಹುಡುಗಿಗೆ ಈಗ ಪ್ರಾಯದ ವಜ್ಜೆಯನ್ನು, ಎಂತದೋ ಬಿಗಿತವನ್ನು ಸಂಬಾಳಿಸಲು ಕಲಿಸಿದ್ದು, ಕೋಡುಬಳೆ ತಿನ್ನುವಾಗಲೂ ಕನ್ನಡಿಯೆದುರೇ ನಿಂತು ತಾನು ಹೇಗೇಗೆಲ್ಲ ಜಗಿಯುತ್ತೇನೆ ಎಂದು ನೋಡುತ್ತಾ ದೊಡ್ಡವರನ್ನು ನಗಿಸುತ್ತಿದ್ದವಳಿಗೆ ತನ್ನ ಬೆಳೆದ ಕಣ್ಣುಗಳ ಸಮುದ್ರದಲ್ಲಿ ಪ್ರೀತಿಯ ದೋಣಿಯೊಂದು ಅಲೆಗಳನ್ನು ದಾಟುವಾಟದಲ್ಲಿ ಚೆಂದಗಟ್ಟಿವೆ ಎಂಬ ಸುಳಿವು ಕೊಟ್ಟಿದ್ದು, ಮೈನೆರೆದ ಅನುಭವವಾದ ಮೊದಲ ಕ್ಷಣದಲ್ಲಿ ತನ್ನ ಮುಖದ ತುಂಬಾ ಮೂಡಿದ್ದ ಆತಂಕದ ಕಂಪನದ ಬಾಧೆಯಲ್ಲಿ ಬೆಚ್ಚಿದವಳಿಗೆ ಲಜ್ಜೆಯ ಬಣ್ಣಗಳ ಗುರುತನ್ನು ಹೇಳಿಕೊಡುತ್ತ ಪುಳಕ ಮೀಯಿಸಿದ್ದು....ಎಲ್ಲವೂ ಎಲ್ಲವೂ ಇದೇ ಕನ್ನಡಿ.

ಈ ಕನ್ನಡಿಯ ಹೂಚಿತ್ರಗಳ ಚೌಕಟ್ಟನ್ನು ಮಾಡಿದ ಮಾಟದ ಕೈಯವನೇ ಮಾಡಿದ್ದೆಂಬಂತಿರುವ ಒಂದು ಮಂಚ ಈ ಹಿಂದೆ ಗೌಡನ ಮನೆಯಲ್ಲಿತ್ತು. ಆದರೆ ಗೌಡನ ಮನೆತನದ ಹಿರಿಯನೇ ಆ ಮಂಚವನ್ನು ಮಾಡಿದವನಾಗಿದ್ದ.

ಇದು ನಾಲ್ಕು ತಲಗಳಿಗೆಯ ಹಿಂದೆ. ಜಲಜಾಕ್ಷಿಗಿಂತ ಮೊದಲು ಈ ಮನೆಯಲ್ಲಿ ಹುಟ್ಟಿದ್ದ ಹೆಣ್ಣುಮಗಳಿಗಾಗಿ ಅವನು ಅಷ್ಟೊಂದು ಪ್ರೀತಿಯಿಂದ ಮಾಡಿದ ಮಂಚ ಎಂತಾ ಸುಂದರವಾದದ್ದಾಗಿತ್ತೆಂದರೆ, ಅದು ಹೇಗೋ ಅದನ್ನು ನೋಡುತ್ತಾ ನೋಡುತ್ತಾ ಇದ್ದರೆ ಮೈತುಂಬಿದ ಹೆಣ್ಣುಮಗಳನ್ನೇ ಎದುರಲ್ಲಿ ಕಂಡಂತಾಗಿಬಿಡುತ್ತಿತ್ತಂತೆ. ಎಲ್ಲರೂ ಆ ಮಂಚದ ಸೊಗಸನ್ನು ಹೊಗಳುವವರೇ. ಆದರೆ ಈ ಹೊಗಳಿಕೆ ಕೇಳಿಸಿಕೊಳ್ಳಲು ಅದನ್ನು ತಯಾರು ಮಾಡಿದ ಹಿರಿಯ ಇರಲಿಲ್ಲ. ಮಂಚವನ್ನು ಪೂರ್ತಿ ಮಾಡಿ ಮುಗಿಸಿದ ದಿನ ಅದರ ಚೆಂದಕ್ಕೆ ತಾನೇ ಹುಚ್ಚನಂತಾಗಿ ಸಂಭ್ರಮಪಟ್ಟವನು ಮತ್ತೆ ಮೂರೇ ದಿನಗಳಲ್ಲಿ ಸತ್ತಿದ್ದ. ಈ ಮೂರು ದಿನಗಳಲ್ಲಿ ಅವನು ಮಂಕಾಗುತ್ತಾ ಮಂಕಾಗುತ್ತಾ, ಮಂಚ ತಯಾರಾದ ದಿನ ಎಷ್ಟು ಸಂಭ್ರಮಪಟ್ಟಿದ್ದನೋ ಅದಕ್ಕೆ ಪೂರ್ತಿ ವಿರುದ್ಧವಾಗಿ ವಿಚಿತ್ರ ಕನಲಿಕೆಯ ಸ್ಥಿತಿಗೆ ಹೋಗಿ ಬಿದ್ದಿದ್ದವನನ್ನು ಗಮನಿಸುವುದಕ್ಕೂ ಒಬ್ಬರೂ ಇರಲಿಲ್ಲ. ಎಲ್ಲರೂ ಮಂಚದ ಮೋಡಿಗೆ ಸಿಕ್ಕಿಬಿಟ್ಟಿದ್ದರು. ಗೌಡನ ಮನೆಯ ಆ ಹಿರೀ ತಲೆ ಅತ್ಯಂತ ದರಿದ್ರ, ಅನಾಥ ಭಾವದಲ್ಲಿ ಬಾಯೇ ಇಲ್ಲದಂತಾ ಸ್ಥಿತಿಯಲ್ಲಿ ಏನೇನನ್ನೋ ಕನವರಿಸುತ್ತ ಎದೆ ಬಡಿದುಕೊಳ್ಳುತ್ತ ಉಸಿರು ಬಿಟ್ಟಿತ್ತು. ಎಂತಾ ಚೆಂದದ ಮಂಚ ಮಾಡಿದ್ದವ ಅದರ ಮೇಲೆ ಒಂದು ದಿನವಾದರೂ ಮಲಗಲಿಲ್ಲ, ಯಾವುದಕ್ಕೂ ಪಡೆದು ಬಂದಿರಬೇಕು ಅಂಬೂದು ಎಷ್ಟು ಖರೆ ಎಂದೇ ಕೊರಗಿತ್ತು ಊರು. ಆಮೇಲೆ ಅವನ ಸಾವು ಮರೆತುಹೋಯಿತು, ಅವನ ನೆನಪು ಅಡಗಿಹೋಯಿತು. ಮಂಚ ಮಾತ್ರ ಎಲ್ಲರ ಕಣ್ಣಲ್ಲಿ ನಿಂತುಬಿಟ್ಟಿತು.

ಗೌಡನ ಮನೆಮಗಳ ಹೆಸರಲ್ಲೇ ತಯಾರಾದ ಮಂಚಕ್ಕೆ ಅದಾಗಲೇ ಪ್ರಾಯಕ್ಕೆ ಬಂದ ಆಕೆಯೇ ಹಕ್ಕುದಾರಳಾದಳು. ಅದರ ಹೂಗೊಂಡೆ ಸುತ್ತಿದಂತಾ ಕಾಲುಗಳ ಸೊಗಸಿಗೆ, ಕಾಲುಗಳ ತುದಿಯಲ್ಲಿ ನೆಲದಿಂದ ಒಂದಂಗುಲ ಮೇಲೆ ತೂಗುತ್ತಿರುವಂತೆ ಕಟ್ಟಿರುವ ಬೆಳ್ಳಿ ಗೆಜ್ಜೆಗಳ ಇಂಪಾದ ಉಲಿತಕ್ಕೆ, ಮಂಚದ ಮೈಯ ನಯಕ್ಕೆ ಅವಳು ಸೋಲುತ್ತಾ ಹೋಗುವಳು. ಮಂಚದೊಂದಿಗೆ ಒಬ್ಬಳೇ ಮಾತಾಡುತ್ತಾ ಎಷ್ಟೋ ಹೊತ್ತು ಕಳೆದುಬಿಡುವಳು. ಹೀಗೆ ಮಂಚದೊಂದಿಗೆ ಸಂಬಂಧ ಬೆಳೆದ ಕೆಲವೇ ದಿನಗಳಲ್ಲಿ ಅವಳು ಸುಂದರಳಾಗುತ್ತಾ ಆಗುತ್ತಾ ಹೋದಷ್ಟೂ ಮನೆಯ ಮಂದಿಯಿಂದ ದೂರವಾಗುತ್ತಲೂ ಹೋದಳು. ಇದು ಎಷ್ಟಕ್ಕೆ ಬಂತೆಂದರೆ ಮಂಚವನ್ನು ಬಿಟ್ಟು ಅವಳು ಉಳಿಯುವುದೇ ಅಪರೂಪವಾಯಿತು. ಆದರೆ ಮನೆಮಂದಿಗಾರಿಗೂ ಇದು ಕಾಡಲಿಲ್ಲ. ಬದಲಾಗಿ ಮಂಚದ ಬಗ್ಗೆ ಹೊಗಳುವರು.

ಹೀಗಿರುವಾಗಲೇ ಒಂದು ರಾತ್ರಿ ಊರೆಲ್ಲಾ

ಮಲಗಿದೆ. ಗೌಡನ ಮನೆಯಲ್ಲೂ ಮಾತಿಲ್ಲ, ಕತೆಯಿಲ್ಲ, ಆಳುಮಕ್ಕಳೂ ಎಚ್ಚರವಿಲ್ಲ. ಇದ್ದಕ್ಕಿದ್ದಂತೆ ಯಾರೋ ಭೀಕರವಾಗಿ ಚೀರಿಕೊಂಡಂತೆ ಒಂದು ಧ್ವನಿ ಎದ್ದಿತು. ಇಡೀ ಊರನ್ನೇ ಒಂದು ಕ್ಷಣ ಎಚ್ಚರಿಸಿದ ಚೀರಿಕೆಯಾಗಿತ್ತು ಅದು. ಎಚ್ಚರಾದ ಎಲ್ಲರಿಗೂ ಆ ಚೀರಿಕೆಯ ಕೊನೆಯ ಸೊಲ್ಲು ಎಲ್ಲಿಂದಲೋ ಕೇಳಿಬಂದಂತಾಯಿತೆ ಹೊರತು ಇಂತಾ ದಿಕ್ಕಿನಿಂದಲೇ, ಇಂತಾ ಮನೆಯಿಂದಲೇ ಬಂತು ಎಂದು ತಿಳಿಯಲು ಆಗಲಿಲ್ಲ. ಗೌಡನ ಮನೆ ಮಂದಿಗೂ ಹೀಗೇ ಅನುಭವವಾಯಿತು.

ರಾತ್ರಿ ಕಳೆದು ಬೆಳಗಾದಾಗಲೇ ಎಲ್ಲಾ ಗೊತ್ತಾದದ್ದು. ಮಂಚದ ಮೇಲೆ ಮಲಗಿದ್ದ ಗೌಡನ ಮಗಳು ಮಂಚದಿಂದ ಸಿಡಿದೇ ಬಿದ್ದಿದ್ದಾಳೆಂಬಂತೆ ಬಾಗಿಲ ಬಳಿ ಹೆಣವಾಗಿ ಬಿದ್ದಿದ್ದಳು. ಅಷ್ಟೊಂದು ಚೆಂದವಿದ್ದವಳ ಮುಖ ನೋಡಲಿಕ್ಕೇ ಆಗದ ಹಾಗೆ ವಿಕಾರವಾಗಿತ್ತು. ಅವಳು ಮಲಗಿದ್ದ ಮಂಚವಂತೂ ಸೀಳಿ ಸೀಳಿ ಹೋಗಿತ್ತು. ಮೋಹಿನಿ ನೆಲೆಯಾಗಿದ್ದ ಮಂಚ ಅದಾಗಿತ್ತು ಎಂದು ಚೌಕಶಿಯಿಂದ ತಿಳಿಯಿತು. ಮಾತು ಕಳಕೊಂಡು ದಕ್ಕಾಗಿ ಹೋಗಿದ್ದರು ಎಲ್ಲ. ಕನ್ನೆ ಹೆಣ್ಣಿನ ಹೆಣದೊಂದಿಗೆ ಆ ಮಂಚವನ್ನೂ ಸುಟ್ಟು ಹಾಕಲಾಯಿತು.

ಮನೆತನದಲ್ಲಿ ಹೀಗೊಂದು ದುರಂತವಾದ ನಂತರ ಗೌಡನ ಮನೆತನದಲ್ಲಿ ಯಾರೂ ಮಂಚದ ಬಗ್ಗೆ ಮೋಹಪಡಲಿಲ್ಲ. ಈ ಕೆಟ್ಟ ಘಟನೆಯ ನೆನಪು ಮುಂದಿನ ಪೀಳಿಗೆಗಳಲ್ಲೂ ಉಳಿದುಕೊಂಡು ಬಂತು. ಹೀಗಿದ್ದಾಗ ಜಲಜಾಕ್ಷಿ ತನಗೊಂದು ಮಂಚ ಬೇಕೇ ಬೇಕೆಂದು ಹಠ ಹಿಡಿದುಬಿಟ್ಟಳು. ಗೌಡ ದಿಗ್ಭ್ರಾಂತನಾಗಿ ಹೋದ. ಕಡೆಗೂ ದೇವರಲ್ಲಿ ಕೇಳಿ ಒಪ್ಪಿಗೆ ಸಿಕ್ಕಿದ ಮೇಲೆ ಮಂಚ ಮಾಡಿಸಲಾಯಿತು.

ಈಗ ಜಲಜಾಕ್ಷಿಯ ಕೋಣೆಯಲ್ಲಿ ಕನ್ನಡಿಯಷ್ಟೇ ದೊಡ್ಡ ಆಸ್ತಿ ಎಂಬಂತೆ ಇರುವ ಈ ಹೊಸ ಮಂಚವೂ ತುಂಬಾ ಸುಂದರವಾದ್ದೇ. ಜಲಜಾಕ್ಷಿಗೂ ಈ ಮಂಚವೆಂದರೆ ಇಷ್ಟ. ಈ ಮಂಚದ ಮೇಲೆ ಕೂತೇ ಅವಳು ಅಜ್ಜನ ಬಾಯಿಂದ ಹಳೇ ಮಂಚದ ಕತೆ ಹೇಳಿಸಿಕೊಂಡಿದ್ದಾಳೆ.

**ವೆಂಕಟ್ರಮಣ ಗೌಡ**



# ಒಂದು ತೀವ್ರ ಸಂವೇದನೆ



## ಪುಸ್ತಕ ಪುಟ

ಅಭಿವ್ಯಕ್ತಿಯ ಸ್ವರೂಪ ಮತ್ತು ಪರಿಭಾಷೆಯಿಂದ ಕಾವ್ಯ ಮತ್ತು ಚಿತ್ರ ಬೇರೆ ಬೇರೆಯಿರಬಹುದು; ಆದರೆ ಅವರ ಹೊರತಾಗಿ ಅವೆರಡೂ ಎಲ್ಲೋ ಒಂದು ಬೆಸುಗೆಗಾಗಿ ತವಕಿಸುವಂಥವೇ ಆಗಿವೆ. ಹಾಗೆಯೇ ಕವಿ ಮತ್ತು ಕಲಾವಿದ ಬೇರೆ ಬೇರೆಯಾಗಿರಬಹುದು; ಆದರೆ ಅವರಿಬ್ಬರೂ ಸಂವೇದಿಸುವ ಕ್ರಮದಲ್ಲಿ ಎಂಥದೋ ತಾದಾತ್ಮ್ಯವಿರುವುದು ಸಾಧ್ಯ. ಪ್ರತಿಯೊಬ್ಬ ಒಳ್ಳೆಯ ಕವಿಯೂ ತನ್ನೊಳಗೆ ಒಬ್ಬ ಒಳ್ಳೆಯ ಕಲಾವಿದನೇ ಆಗಿರುತ್ತಾನೆ-ರೇಖೆ ಅವನ ಮಾಧ್ಯಮವಲ್ಲದಿದ್ದರೂ. ಹಾಗೆಯೇ ಅಕ್ಷರಗಳಲ್ಲಿ ಅಭಿವ್ಯಕ್ತಿಸಲು ಹೋಗದಿದ್ದರೂ ಪ್ರತಿಯೊಬ್ಬ ಕಲಾವಿದನ ಅಂತರ್ಯದಲ್ಲೂ ಒಬ್ಬ ಕವಿ ಗುನುಗುತ್ತಲೇ ಇರುತ್ತಾನೆ.

ಕೃಷ್ಣ ರಾಯಚೂರು ಪ್ರಕಟಿಸಿರುವ 'ವಿನ್ಯಾಸದ ಹೊರಗೆ' ಕೃತಿ ಈ ಹಿನ್ನೆಲೆಯಲ್ಲಿ ಗಮನ ಸೆಳೆಯುತ್ತದೆ. ಇದು ಕವಿತೆಗಳ ಸಂಕಲನವೆಂಬುದರ ಜೊತೆಗೇ ರೇಖಾ ಚಿತ್ರಗಳ ಸಂಕಲನವೂ ಆಗಿದೆ. ಕವಿತೆಗಳೊಂದಿಗಿರುವ ಇಲ್ಲಿನ ಅವರ ಒಂದೊಂದು ಚಿತ್ರವೂ ಕವಿತೆಗೊಂದು ಚಿತ್ರವಾಗಿರದೆ ತನ್ನದೇ ಸ್ವಂತಿಕೆಯಲ್ಲಿ ತೆರೆದುಕೊಂಡದ್ದಾಗಿದೆ.

ಚಿತ್ರವೊಂದರಲ್ಲಿ ಕವಿತೆಯನ್ನು ನುಡಿಸುವ, ಕವಿತೆಯೊಂದರಲ್ಲಿ ಚಿತ್ರವನ್ನು ಹುಡುಕುವ ಬಗೆಯಾಗಿ 'ವಿನ್ಯಾಸದ ಹೊರಗೆ' ಕೃತಿ ಕಾಣಿಸುತ್ತದೆ. ಒಂದು ತೀವ್ರ ಸಂವೇದನೆಯನ್ನು-ಅದು ವೇದನೆಯೂ ಆಗಿರಬಹುದು-ಪ್ರತಿ ಕ್ಷಣವೂ ಮುದ್ರಿತಗೊಂಡಂಥ ಜ್ಞಾಪಕಚಿತ್ರವಾಗಿ, ಮಿಂಚಾಗಿ, ಮಿಸುಗಾಗಿ, ನಿರ್ಲಿಪ್ತರೂಪಿ ಹಣತೆ ಬೆಳಕಾಗಿ, ತದೇಕ ಧ್ಯಾನವಾಗಿ ಅನುರಣನಗೊಳಿಸುವ ಕವಿತೆಗಳು ಮತ್ತು ಚಿತ್ರಗಳು ಇಲ್ಲಿವೆ.

ತುಷಾರ ಪಾತದ ಸೊಗಸಿನಲ್ಲಿ, ಎಂಥ ಅಬ್ಬರವನ್ನೂ ಮಿದುಗೊಳಿಸಿಕೊಂಡು ದಂಡೆಯನ್ನು ಹಿತವಾಗಿ ಚುಂಬಿಸಬಲ್ಲ ಅಲೆಯ ಅಂತಃಸತ್ವದ ಛಂದದಲ್ಲಿ ನಮ್ಮೊಳಗೆ ಬರುವ ಈ ಕವಿತೆಗಳು ಮತ್ತು ಚಿತ್ರಗಳ ವ್ಯಾಖ್ಯಾನಕ್ಕೆ ಪರಿಭಾಷೆಗಳ ರೂಕ್ಷ ಮಾರ್ಗದ ಅಗತ್ಯ ಖಂಡಿತ ಇಲ್ಲ.

ವಿಜಿ

**(ಇಲ್ಲಿನ ಕೆಲವು ಕವಿತೆಗಳ ರುಚಿಯನ್ನು 'ಕಾದಲ್‌ದೇಶಂ' ಅಂಕಣದಲ್ಲಿ ನೋಡಬಹುದು.)**



**ವಿನ್ಯಾಸದ ಹೊರಗೆ**
ಲೇ: ಕೃಷ್ಣ ರಾಯಚೂರು
ಪ್ರ: ಗೆರೆ, ಬೆಂಗಳೂರು
ಬೆಲೆ: 60 ರೂ.

---

ಈ ಪುಟದಲ್ಲಿ ಪುಸ್ತಕ ಪರಿಚಯ ಬಯಸುವವರು ಪುಸ್ತಕದ ಎರಡು ಪ್ರತಿಗಳನ್ನು ಕಳಿಸಬೇಕು.
ವಿಳಾಸ: ಸಂಪಾದಕ, 'ಹಂಗಾಮ', (ಪುಸ್ತಕ ವಿಭಾಗ), ನಂ.1, 2ನೇ ಮಹಡಿ, 1ನೆ ಕ್ರಾಸ್, ಆರ್.ಕೆ.ಸ್ಟ್ರೀಟ್, ಶೇಷಾದ್ರಿಪುರಂ, ಬೆಂಗಳೂರು-560020.



ಫೀನಿಕ್ಸ್ ವೃತ್ತಾಂತ

# ಅದೇನೋ ಮಗನೆ ಅಂದೆ; 'ಓಹ್, ಅದು ನದಿ ಅಮ್ಮಾ' ಅಂದ!

ಆಕೆ ಹುಟ್ಟು ಕುರುಡಿಯಾಗಿರಲಿಲ್ಲ. ಒಂಬತ್ತು ವರ್ಷಗಳವರೆಗಿನ ಬಾಲ್ಯವನ್ನು ಈ ಲೋಕದ ಬೆಳಕು ಉಣ್ಣುತ್ತಲೇ ಬೆಳೆದವಳಾಗಿದ್ದಳು. ಇದ್ದಕ್ಕಿದ್ದಂತೆ ಕಣ್ಣು ಮಸುಕಾದವು. ಆಮೇಲೆ ಪೂರ್ತಿ ಕುರುಡೇ ಆಗಿಬಿಟ್ಟವು. ಮುಂದಿನ ನಲ್ವತ್ತು ವರ್ಷಗಳು ಆಕೆ ಬದುಕನ್ನೆಲ್ಲ ಕತ್ತಲಲ್ಲೇ ಕಟ್ಟಿದಳು. ಕನಸು ಹುಡುಕಿದಳು. ಮದುವೆ, ಮಕ್ಕಳು, ಪ್ರೀತಿಯ ಗೆಳೆಯರಾದ ನಾಯಿಗಳೊಂದಿಗಿನ ಒಡನಾಟ-ಎಲ್ಲದಕ್ಕೂ ಮನಸ್ಸಿನ ಕಣ್ಣುಗಳ ಮೂಲಕವೇ ಅರ್ಥ ಬರೆದಳು. ಅಂಥ ದಿಟ್ಟೆ, ಛಲಗಾತಿ ಹೆಣ್ಣುಮಗಳು ಅಷ್ಟು ವರ್ಷಗಳ ನಂತರ ಮತ್ತೆ ಶಸ್ತ್ರಚಿಕಿತ್ಸೆಯ ಮೂಲಕ ಮರಳಿ ದೃಷ್ಟಿ ಪಡೆಯುತ್ತಾಳೆ.

ಆಕೆ ಜ್ಯೂಡಿ ಟೇಲರ್.



ಅಂಧತ್ವದಲ್ಲೂ ತನ್ನ ಬದುಕನ್ನು ಆತ್ಮವಿಶ್ವಾಸಿಯಾಗಿ ರೋಚಕತೆಯಿಂದಲೇ ಅನುಭವಿಸಿದ ಜ್ಯೂಡಿ, ಮರಳಿ ಕಣ್ಣು ಪಡೆದಾಗಿನ ಸಡಗರಕ್ಕೂ ಅಷ್ಟೇ ಜೀವನೋತ್ಸಾಹದಿಂದ ತೆರೆದುಕೊಂಡವಳು. ತನ್ನ ಕಥೆ ಹೇಳಿದ್ದಾಳೆ. ಅದರ ಕೆಲವು ಭಾಗಗಳು-ಭಾರತಿ ಮೋಹನ ಕೋಟಿ ಅವರ ಅನುವಾದದಿಂದ.

●

**ಮ**ದುವೆಯಾಗುವವರೆಗೂ, ಮನೆ ನೋಡಿಕೊಳ್ಳುವ ಕಷ್ಟನಷ್ಟಗಳ ವಿವರಗಳು ನನಗೆ ತಿಳಿದಿರಲಿಲ್ಲ. ನನಗಿಷ್ಟ ಬಂದಂತೆ ನಾನಿದ್ದೆ. ಆದರೆ ಈಗ ಇಯಾನ್‌ನನ್ನು ನೋಡಿಕೊಳ್ಳಬೇಕಿತ್ತು. ಮಧುಚಂದ್ರ ಮುಗಿಸಿ ಬಂದ ಮೊದಲ ದಿನವೇ ಊಟದ ಮೇಜಿನ ಮೇಲೆ ತಟ್ಟೆ ಬಟ್ಟಲು ಅಣಿಗೊಳಿಸುತ್ತಿರುವಾಗ ನಾನು ಮಾಡಿದ ಅಡುಗೆಯೆಲ್ಲ ಆಕಸ್ಮಿಕವಾಗಿ ಚೆಲ್ಲಿ ಹೋಯಿತು. ಹತಾಶೆಯಿಂದ ಅಳುವುದು ಬಿಟ್ಟು ಬೇರೇನೂ ತೋಚಲಿಲ್ಲ.

ಆದರೆ ಬರಬರುತ್ತ ನನ್ನ ಮೂರ್ಖತನದ ಅರಿವಾಯ್ತು. ಕಣ್ಣಿಲ್ಲದವರಲ್ಲ ಕಣ್ಣಿದ್ದವರೂ ಎಲ್ಲ ಮನೆಗೆಲಸಗಳನ್ನು ತಾವೇ ಮಾಡಿಕೊಳ್ಳಲು ಸಾಧ್ಯವಿಲ್ಲ. ಅದು ವಿಪರೀತ ಶ್ರಮ ಹಾಗೂ ಸಮಯ ಬೇಡುತ್ತದೆ. ಈ ಸತ್ಯ ತಿಳಿದ ನಂತರ ನಾನು ನನಗಾದ ಮಟ್ಟಿಗೆ ಕೆಲಸ ನಿಭಾಯಿಸಿಕೊಂಡು-ಅನುಭವದಿಂದ ಹೊಸ ಕೆಲಸ ಕಲಿತುಕೊಂಡು ನೆಮ್ಮದಿಯಾಗಿರಲು ಕಂಡುಕೊಂಡೆ.

ಆದಾಗ್ಯೂ ಒಳ್ಳೆಯ ಗೃಹಿಣಿಯೆನಿಸಿಕೊಳ್ಳುವ ಹುಚ್ಚಿಗೆ ಬಿದ್ದು ಮನೆ ಸ್ವಚ್ಛತೆಯೆಡೆ ಹೆಚ್ಚು ಹೆಚ್ಚು ಗಮನ ಹರಿಸಿ ಕೆಲಸ ಮಾಡಿ ದಣಿದೆ. ನನ್ನ ಈ ಒಣ ಅಹಂನಿಂದ ನನ್ನ ಪತಿಯನ್ನು ಮರುಳು ಮಾಡುವೆನೆಂಬ ಮೂರ್ಖತನವನ್ನೂ ಮಾಡಿದೆ. ಯಾರೂ ಎಲ್ಲ ಕೆಲಸಗಳಲ್ಲಿಯೂ ಪರಿಣತರಾಗಲಾರರೆಂಬ ಸರಳ ವಾಸ್ತವಿಕತೆ ಅರಿವಿಗೆ ಬಂದಂತೆ ನನ್ನ ಹುಚ್ಚುತನವನ್ನು ಕೈಬಿಟ್ಟೆ.

ತಪ್ಪು ಮಾಡಿದಾಗ ಕೋಪಿಸಿಕೊಳ್ಳುವುದನ್ನು ಬಿಟ್ಟು ನಕ್ಕು ಬಿಡುವುದನ್ನು ರೂಢಿಸಿಕೊಂಡೆ. ಇಯಾನ್ ಒಮ್ಮೆ ಅವರೇಕಾಳನ್ನು ತೋಟದಿಂದ ಆಯ್ದು ಡಬ್ಬ ತುಂಬಿಸಿ ಫ್ರಿಜ್‌ನಲ್ಲಿಟ್ಟಿರುವುದಾಗಿ ಹೇಳಿದ್ದ. ಅದರಂತೆ ಫ್ರಿಜ್ ತೆಗೆದು ಡಬ್ಬ ಅಲುಗಾಡಿಸಿ ನೋಡಿ ಕಾಳಿನ ಸದ್ದು ಕೇಳಿ ಖಚಿತಪಡಿಸಿಕೊಂಡೆ. 'ಲಿವರ್ ಕ್ಯಾಸರೋಲ್' ಎಂಬ ತಿಂಡಿಗೆ ಅವರೇಕಾಳು ಹಾಕಬೇಕಿತ್ತು.

ಸಂಜೆ ಇಯಾನ್ ಬಂದ ಮೇಲೆ ಊಟಕ್ಕೆ ಕುಳಿತಾಗ 'ಲಿವರ್ ಕ್ಯಾಸರೋಲ್' ತುಂಬಿದ ಬೋಗುಣಿಯ ಮುಚ್ಚಳ ಸರಿಸಿದೆನಷ್ಟೇ, ಇಯಾನ್ ಒಮ್ಮೆಲೇ "ಓಹ್! ನಾನೆಂದೂ ಜಾಂಬಲಿ ಬಣ್ಣದ ಮಾಂಸದಡುಗೆಯನ್ನು ನೋಡಿಯೇ ಇರಲಿಲ್ಲವಲ್ಲ!" ಎಂದು ಉದ್ಗರಿಸಿದ. ಹೀಗೇಕಾಯ್ತೆಂದು ಯೋಚಿಸಿದಾಗ ತಿಳಿದು ಬಂದದ್ದೇನೆಂದರೆ ಇಯಾನ್ ಬ್ಲಾಕ್ ಕರೆಂಟ್ ಕಾಳುಗಳನ್ನೂ ಬಿಡಿಸಿ ಮತ್ತೊಂದು ಡಬ್ಬದಲ್ಲಿ ಹಾಕಿ ಫ್ರಿಜ್‌ನಲ್ಲಿಟ್ಟಿದ್ದ. ನಾನು ತಿಳಿಯದೇ ಅವನ್ನೇ ಅವರೇಕಾಳೆಂದು ಹಾಕಿದ್ದೆ. ಇಯಾನ್ ಹೋಗಲಿ, ಡಾನಾ ಕೂಡ ಅದರ ರುಚಿ ನೋಡಲು ನಿರಾಕರಿಸಿತು. ಇಂಥ ಎಷ್ಟೋ ಚಿಕ್ಕಪುಟ್ಟ ತಪ್ಪುಗಳು ತಮಾಷೆಯ ಕ್ಷಣಗಳಾಗಿ ಮಾರ್ಪಡುವಷ್ಟು ನನ್ನನ್ನು ತಿದ್ದಿಕೊಂಡೆ.

ಮನೆಗೆಲಸ ಹೇಗೆ ಮಾಡಿಕೊಳ್ಳುವೆನೊ ಎಂದು ಅಚ್ಚರಿ ಪಡುವವರಿಗೆ ಮತ್ತೊಂದು ಸವಾಲೆಸೆದೆ: ಪುಟ್ಟ ಮಗುವಿನ ತಾಯಿಯಾಗಿ. ನಮ್ಮ ಮಗ ಆ್ಯಡಮ್ ನನ್ನ ಬಾಳಿಗೆ ಹೊಸ ಅರ್ಥ ನೀಡಿದ. ಆಸ್ಪತ್ರೆಯ ದಾದಿಯರು ಹತ್ತು ದಿನ ನನಗೆ ಮಗುವನ್ನು ನೋಡಿಕೊಳ್ಳುವ ತರಬೇತಿ ನೀಡಿದರು.

ಆ್ಯಡಮ್ ದೊಡ್ಡವನಾದಂತೆ ಅವನಿಗೆ ಉಣಿಸುವುದು ನನಗೆ ದೊಡ್ಡ ಸಮಸ್ಯೆಯಾಯಿತು. ಅವನ ಬೆನ್ನನ್ನು ನನ್ನ ಎದೆಗಾನಿಸಿ ಕುಳ್ಳಿರಿಸಿಕೊಂಡು ಎಡಗೈ ತೋರುಬೆರಳಿನಿಂದ ಅವನ ಕೆಳ ತುಟಿ ಒಡಿದು ಬಲಗೈಯಿಂದ ಚಮಚವನ್ನು ಬಾಯೊಳಗಿರಿಸುತ್ತಿದ್ದೆ. ಆದರೆ ಅದು ಹೇಗೋ ಅವನು ಚಮಚ ಬಾಯಿಯ ಹತ್ತಿರ ತರುವ ಹೊತ್ತಿಗೆ ಮೋರೆ ತಿರುಗಿಸಿಬಿಡುತ್ತಿದ್ದ. ಚಮಚದೊಳಗಿದ್ದುದು ಬಾಯಿಯ ಬದಲು ಕಿವಿ ತಲುಪುತ್ತಿತ್ತು. ಮಗುವನ್ನು ನೋಡಿಕೊಳ್ಳುವ ಈ ಎಲ್ಲ ಕ್ಷಣಗಳು ಅವಿಸ್ಮರಣೀಯವಾಗಿದ್ದುವು.

ಆ್ಯಡಮ್ ದೊಡ್ಡವನಾದಂತೆ ಅವನಿಗೆ ಹೊಸ ವಿಷಯ ಕಲಿಸುವಲ್ಲಿ ನಾನೂ ಹೊಸ ವಿಧಾನಗಳನ್ನು ಅಳವಡಿಸಿಕೊಂಡೆ. ತುಂಬ ಸೃಜನಾತ್ಮಕವಾಗಿ ಕಲಿಕಾ ವಿಧಾನ ರೂಢಿಸಿಕೊಂಡೆ. ಬಣ್ಣದ ಹಾಳೆಗಳನ್ನು ಕಾರ್ಡ್ ಬೋರ್ಡ್‌ಗೆ ಅಂಟಿಸಿ ಬ್ರೇಲ್‌ನಲ್ಲಿ ಬಣ್ಣದ ಹೆಸರು ಬರೆದುಕೊಂಡು ಅವನಿಗೆ ಅದು ಯಾವ ಬಣ್ಣದ ಹಾಳೆ ಎಂದು ಓದಿ ಹೇಳಿ ಗುರುತಿಸಲು ಕಲಿಸಿದೆ. ಅವನನ್ನೆತ್ತಿಕೊಂಡು ರಸ್ತೆಬದಿಗೆ ಬಂದು ನಾನೂ ನೋಡುತ್ತಿರುವೆನೇನೋ ಎಂಬಂತೆ 'ಅಗೋ ನೋಡು ಬಸ್ಸು ಬಂತು' 'ಗಿಡ ನೋಡು ಹೇಗಿದೆ?' ಎಂದೆಲ್ಲ ಹೇಳುತ್ತಿದ್ದೆ.

ಕಥೆಗಳ ಚಿತ್ರಗಳನ್ನು ಕಾರ್ಡ್‌ಬೋರ್ಡಿಗೆ ಅಂಟಿಸಿ ಕಥೆಯನ್ನ ಬ್ರೆಲ್‌ನಲ್ಲಿ ಬರೆದು ನಾನು ಓದಿ ಹೇಳುತ್ತಿರುವಂತೆ ಆ್ಯಡಮ್ ಚಿತ್ರ ನೋಡುತ್ತ ಕಥೆ ತಿಳಿದುಕೊಳ್ಳುತ್ತಿದ್ದ.


ಜ್ಯೂಡಿ ಟೇಲರ್ ತನ್ನ ಪ್ರೀತಿಯ ನಾಯಿಯೊಂದಿಗೆ

ನಾಯಿಗಳೊಡನೆ ಸಹಜವಾಗಿಯೆ ನನ್ನ ಸ್ನೇಹ ಇತರರಿಗಿಂತ ಗಾಢವಾಗಿತ್ತು. ಆದರೆ ಅವುಗಳನ್ನಗಲಬೇಕಾದ ಸಂದರ್ಭ ಮಾತ್ರ ತೀರ ದುರ್ಭರವೆನಿಸುತ್ತಿತ್ತು. ಡಾನಾಗೆ ಹನ್ನೊಂದು ವರುಷ ತುಂಬಿದ ನಂತರ ನಿಧಾನವಾಗಿ ಕೃಶ ಹಾಗೂ ನಿಶಕ್ತಳಾಗುತ್ತ ನಡೆದಳು. ಊಟ ಸಹ ನಿಲ್ಲಿಸಿದಳು.

ಡಾನಾಳ ಅಗಲುವಿಕೆಯ ಯಾತನೆಯನ್ನು ನಾನು ಭರಿಸದಾದೆ. ಮತ್ತೊಂದು ನಾಯಿ ತಂದರೂ ಡಾನಾಳನ್ನು ಮರೆಯುವೆನೆಂಬ ಭರವಸೆ ಬರದಾಯಿತು.

ಹಲವಾರು ಹೊಸ ಬದಲಾವಣೆಗಳಾದವು. ಡಾನಾಳ ಸ್ಥಾನ ಮಾರ್ಟಿನ್ ಆಕ್ರಮಿಸಿದ. ಆ್ಯಡಮ್‌ನೊಡನೆ ಆಡಲು ಪುಟ್ಟ ತಮ್ಮ ಬೆಂಜಾಮಿನ್ ಹುಟ್ಟಿದ. 1977ರಲ್ಲಿ ಬೆಂಜಾಮಿನ್‌ನ ಆಗಮನದ ನಂತರ ನಮ್ಮ ಮನೆಯ ಪಕ್ಕದಲ್ಲಿದ್ದ ಮನೆಯೊಂದು ಮಾರಾಟಕ್ಕಿರುವುದು ತಿಳಿದುಬಂತು. ಅದು ತುಸು ಎತ್ತರದ ದಿಬ್ಬದ ಮೇಲಿತ್ತು. ದಿಬ್ಬದ ಮೇಲಿನ ಬಂಗಲೆ ನನಗೆ ತುಂಬ ಆಕರ್ಷಕವೆನಿಸಿ ಅದನ್ನು ಖರೀದಿಸಿದೆವು. ಹಲವಾರು



ಗುರುರಾಜ್ ಎಸ್. ನಾಯಕ್

ಜನ "ಅಂಧಳಾದ ನೀನು ಪುಟ್ಟ ಮಕ್ಕಳನ್ನು ಕಟ್ಟಿಕೊಂಡು ದಿಬ್ಬ ಹತ್ತಿ ಇಳಿಯುವುದು ಸಾಧ್ಯವಾ? ಕಷ್ಟವಲ್ಲವಾ?" ಎಂದು ಉದ್ಗರಿಸಿದರು. "ಅದೇ, ಅದೇ ನನಗೆ ಬೇಕಿದ್ದುದು. ಕಷ್ಟವಾದುದನ್ನು ಸಾಧ್ಯವಾಗಿಸುವುದು–ಸವಾಲು ಸ್ವೀಕರಿಸುವುದು" ಉತ್ತರಿಸಿದೆ.

ನನ್ನ ಮಕ್ಕಳೂ ಇಯಾನ್‌ನಂತೆಯೇ ನನ್ನ ಅಂಗವಿಕಲತೆಯನ್ನು ಎಂದೂ ಅಡ್ಡಿ ಎಂದು ಭಾವಿಸಿಲ್ಲ. ಒಮ್ಮೆ ಬೆಂಜಾಮಿನ್ ಗಗನಯಾತ್ರಿಯಾಗಿ ನಟಿಸುತ್ತ ಪಡಸಾಲೆಯಲ್ಲಿ ಆಡುತ್ತಿದ್ದ, ನಾನು ಅಡುಗೆ ಕೋಣೆಯಲ್ಲಿದ್ದೆ. ಅಂತಃಸ್ಫೂರ್ತಿಯಿಂದ ನನಗೇಕೋ ಬೆಂಜಾಮಿನ್ ಚಂದ್ರನ ಮೇಲೆ ನಡೆದಾಡುವ ನಟನೆಯನ್ನು ಸೋಫಾದ ಮೇಲೆ ಅಡ್ಡಾಡುತ್ತ ಮಾಡುತ್ತಿರುವ ಎನಿಸಿತು. ಅಡುಗೆಕೋಣೆಯಿಂದಲೇ ನಾನು "ಸೋಫಾದಿಂದ ಕೆಳಗಿಳಿ ಮಗೂ" ಎಂದು ಕೂಗಿದೆ. "ಓಹ್! ಅಮ್ಮಾ ನೀನು ಕುರುಡಿಯಾಗಿರದಿದ್ದರೇ ಒಳ್ಳೇದಿತ್ತು" ಎಂದ ಬೆಂಜಾಮಿನ್.

ನನಗೊಂದು ರೀತಿಯ ವೇದನೆಯಾಯಿತು. ಅಷ್ಟರಲ್ಲೇ ಬೆಂಜಾಮಿನ್ "ನನ್ನ ಸ್ನೇಹಿತರ ತಾಯಂದಿರಿಗೆ ನಾವು ಸೋಫಾದ ಮೇಲೆ ಅಡ್ಡಾಡುವುದು ಗೊತ್ತೇ ಆಗುವುದಿಲ್ಲ. ಬಹುಶಃ ಅವರು ಕುರುಡರಲ್ಲವಲ್ಲ ಅದಕ್ಕೇ ಏನೋ" ಎಂದ. ನಾನಿದನ್ನು ಕೇಳಿ ನಕ್ಕುಬಿಟ್ಟೆ.

ನಮ್ಮ ಸ್ನೇಹಿತರೊಬ್ಬರು ಹಸನ್ ಸಲೀಮ್ ಎಂಬ ನೇತ್ರತಜ್ಞರ ಹೆಸರು ಹೇಳಿದರು. ಅವರು ನನ್ನ ಮೆಳ್ಳುಗಣ್ಣನ್ನು ಚಿಕ್ಕ ಶಸ್ತ್ರ ಚಿಕಿತ್ಸೆಯಿಂದ ಸರಿಪಡಿಸಬಹುದೆಂದರು. ಮೊದಲು ಎಡಗಣ್ಣಿನ ಶಸ್ತ್ರ ಚಿಕಿತ್ಸೆ ಮಾಡಲು ಆ ತಿಂಗಳ ಕೊನೆವಾರದ ದಿನ ನಿಗದಿಪಡಿಸಿದರು.

ಶಸ್ತ್ರ ಚಿಕಿತ್ಸೆಯ ಐದು ದಿನಗಳ ನಂತರ ಇಯಾನ್ ನನ್ನನ್ನು ಮನೆಗೆ ಕರೆತಂದ. ಆಸ್ಪತ್ರೆಯಿಂದ ಮನೆಗಿದ್ದ ಹದಿನೈದು ಕಿಲೋಮೀಟರ್ ದಾರಿಯ ಪಯಣ ನನಗೆ ಅತ್ಯಂತ ಮಜ ನೀಡಿತು.

ದಾರಿಯುದ್ದಕ್ಕೂ ಬೆಳ್ಳಗೆ ಹೊಳೆವ ಉದ್ದನೆಯ ಗೆರೆಗಳು ಏನೆಂಬುದೇ ನನಗೆ ತಿಳಿಯಲಿಲ್ಲ. ಇಯಾನ್ ಹೇಳಿದಾಗಲೇ ಗೊತ್ತಾಯಿತು–ಅವು ದೀಪದ ಕಂಬ ಹಾಗೂ ಟೆಲಿಫೋನ್ ಕಂಬಗಳೆಂದು. ಹೊರಳುತ್ತಾ ಸಾಗುವ ದಾರಿಯನ್ನು ನೋಡುವುದು ನನಗೆ ಮೋಜೆನಿಸಿತು.

ಮನೆ ತಲುಪಿದೆವು. ಬಾಗಿಲು ತೆಗೆದಾಕ್ಷಣ ಮಾರ್ಟಿನ್-ವಿಕ್ಟರ್ ನನ್ನೆದುರುಗೊಂಡವು. ನನ್ನನ್ನು ನೋಡಿ ಸಂತಸದಿಂದ ನೆಗೆದಾಡಿದವು. ನನ್ನ ಮಾರ್ಗದರ್ಶಿ ಸ್ನೇಹಿತರು ಇಷ್ಟು ಸುಂದರವಾಗಿರುವರು ಎಂದು ನನಗೆ ಗೊತ್ತೇ ಇರಲಿಲ್ಲ. ಅವುಗಳ ಮೃದು ಕಪ್ಪು ಕಂಗಳೇ ಈವರೆಗೂ ನನಗೆ ದಾರಿ ತೋರಿಸಿದ್ದು ಎಂದು ನೆನೆದು ಕಂಗಳು ಒದ್ದೆಯಾದವು.

ನನಗೆ ಚಿಕ್ಕ-ಪುಟ್ಟ ಸಂಗತಿಗಳೂ ಅದ್ಭುತವೆನಿಸಿದವು. ಸಾಬೂನಿನ ಗುಳ್ಳೆಗಳು, ಬಾಚಣಿಕೆಯಲ್ಲಿ ಉಳಿದ ಬೇಕೂದಲು ಎಲ್ಲವೂ ಅಚ್ಚರಿ, ಅದ್ಭುತವಾಗಿದ್ದವು.

ಒಂದು ಬೆಳಗ್ಗೆ ಪಡಸಾಲೆಯ ಕಿಟಕಿಯಿಂದ ಹೊ

ನೋಡುತ್ತಿದ್ದಂತೆ ದೂರದಲ್ಲಿ ಬೆಳ್ಳಿಯ ಗೆರೆಯೊಂದು ಜೀವತಳೆದು ತೋನೆದಂತೆ, ಬೆಳಕಿನ ಚಿಕ್ಕಪುಟ್ಟ ತುಣುಕುಗಳು ಹಾರಾಡಿದಂತೆ ಅನಿಸಿತು.

ಮಗನನ್ನು ಕರೆದು ಅದೇನೆಂದು ಕೇಳಿದೆ. ಅವನು 'ಓಹ್, ಅದು ನದಿ ಅಮ್ಮಾ' ಎಂದ.

ಹತ್ತು ವರುಷಗಳಿಂದ ನದಿಯ ಸಾನ್ನಿಧ್ಯದಲ್ಲೇ ಇದ್ದರೂ 'ನದಿ' ಏನೆಂದು ಈಗ ತಿಳಿಯಿತು.

ಜನರ ಮುಖಗಳನ್ನು ನಾನು ದಿಟ್ಟಿಸುತ್ತಿರುವುದು ಅವರಿಗೆ ಏನೆನಿಸುತ್ತಿತ್ತೊ? ಇಯಾನ್‌ನನ್ನು ನಾನು ತುಂಬು ಹೊತ್ತು ದಿಟ್ಟಿಸಿದರೆ ಅವನು ಮುಜುಗರ ಪಟ್ಟುಕೊಳ್ಳುತ್ತಿದ್ದ. ಬಹುಕಾಲದಿಂದ ಪರಿಚಿತರಿದ್ದವರನ್ನು ನೋಡುವುದೂ ಚೋದ್ಯವೇ ಆಗಿತ್ತು. ಪರಿಚಿತರಿದ್ದರೂ ಮುಖ ಪರಿಚಯ ಮಾಡಿಕೊಳ್ಳಬೇಕಿತ್ತಲ್ಲ.

ಬರಬರುತ್ತ ನನ್ನ ದೃಷ್ಟಿ ಹೆಚ್ಚು ಸ್ಪಷ್ಟವಾಯಿತು. ಬಣ್ಣಗಳು ಕಾಣತೊಡಗಿದವು. ಆದರೂ ಎಷ್ಟೋ ವಿಷಯಗಳು ನೋಡಿದರೂ ತಿಳಿಯುತ್ತಿರಲಿಲ್ಲ. ಇಯಾನ್‌ನನ್ನು, ಮಕ್ಕಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದೆ. ಆದರೂ ಅಂತರಾಳದಲ್ಲಿ ಮತ್ತೆಲ್ಲಿ ದೃಷ್ಟಿ ಕಳೆದುಕೊಳ್ಳುವೇನೊ ಎಂಬ ಭೀತಿ ಇತ್ತು.

ಒಂದು ನಸುಕಿನಲ್ಲಿ ಯಾಕೋ ಕಿಟಕಿಯಿಂದಾಚೆ ನನಗೇನೂ ಕಾಣುತ್ತಲೆ ಇಲ್ಲವಲ್ಲ ಎಂದು ಕಳವಳಪಟ್ಟುಕೊಂಡು ಇಯಾನ್‌ನನ್ನು ಕರೆದು ಕೇಳಿದೆ. "ಹುಚ್ಚಿ ಪರದೆಯ ಮೂಲಕವೂ ಕಾಣಲು ಸಾಧ್ಯವಾ?" ಎಂದು ಕಿಟಕಿಯ ತೆರೆ ಸರಿಸಿದ. ಮನೆ, ಛಾವಣಿ, ಹೊಗೆಗೂಡು, ದಾರಿ ಎಲ್ಲ ಕಂಡ ಮೇಲೆ ನನ್ನ ಹುಚ್ಚುತನಕ್ಕೆ ನನಗೇ ನಗೆ ಬಂತು. ನನ್ನ ದೃಷ್ಟಿಯ ಸ್ಪಷ್ಟತೆ, ಬೆಳಕು, ನನ್ನ ಮನಃಸ್ಥಿತಿ ಎಲ್ಲವನ್ನೂ ಅವಲಂಬಿಸಿರುತ್ತಿತ್ತು.

ಈಗ ನಾನು ಹೆಚ್ಚುಹೆಚ್ಚು ಸ್ವಾವಲಂಬಿಯಾದರೂ ಸಹ ಜನದಟ್ಟಣೆ ಇರುವ ದಾರಿ ಕ್ರಮಿಸುವಲ್ಲಿ ವಿಕ್ಟರನ ಸಹಾಯದ ಅಗತ್ಯವಿತ್ತು. ಅಲ್ಲದೆ ನನಗೆ ದಾರಿಯೂ ಅಪರಿಚಿತ ಆಗಿತ್ತಲ್ಲ. ಈಗ ವಿಕ್ಟರ್ ನನ್ನನ್ನು ಎಷ್ಟು ಸುರಕ್ಷಿತವಾಗಿ ಮನೆಗೆ ಕರೆತರುತ್ತಿದ್ದನೆಂದು ಸ್ಪಷ್ಟವಾಗತೊಡಗಿತು. ದೃಷ್ಟಿ ಮರಳುವ ಮುನ್ನ ದಾರಿಯಲ್ಲಿ ನಾಲ್ಕು ಕಡೆ ವಿಕ್ಟರ್ ನಿಧಾನವಾಗಿ ನಡೆಯುತ್ತಿದ್ದ, ಇಲ್ಲವೆ ನಿಂತೇ ಬಿಡುತ್ತಿದ್ದ. ಆಗ ಬೇಕೆಂದೆ ಹೀಗೆ ಮಾಡುವನೇನೊ ಎನಿಸಿತ್ತು. ಆದರೆ ಈಗ ನೋಡಿದಾಗ ತಿಳಿಯಿತು–ಎರಡು ಕಡೆ ಕಾಲುದಾರಿ ಪೂರ್ತಿ ಒಡೆದು ಹೋಗಿ ತೆಗ್ಗು ದಿನ್ನೆಯಿತ್ತು. ಮತ್ತೆರಡು ಕಡೆ ಮಳೆನೀರು ನಿಂತ ಗುಂಡಿಗಳಿದ್ದವು. ಅಲ್ಲಲ್ಲಿ ನಾನು ಎಡವಿ, ಮುಗ್ಗರಿಸಿ ಬೀಳದಂತೆ ವಿಕ್ಟರ್ ಇಷ್ಟು ದಿನ ದಾರಿ ತೋರಿಸಿ ಕರೆತಂದಿದ್ದಕ್ಕೆ ನಾನೆಷ್ಟು ಕೃತಜ್ಞತೆ ಸಲ್ಲಿಸಿದರೂ ಸಾಲದೆನಿಸಿತು.

ಮೊದಲ ಶಸ್ತ್ರಚಿಕಿತ್ಸೆಯ ನಾಲ್ಕು ತಿಂಗಳ ನಂತರ ಬಲಗಣ್ಣಿನ ಶಸ್ತ್ರ ಚಿಕಿತ್ಸೆಯಾಯಿತು. ನಾನು ದೃಷ್ಟಿ ಮರಳಿ ಪಡೆದ ಕಥೆ ರೋಚಕವೆನಿಸಿ ರೇಡಿಯೋ, ದೂರದರ್ಶನದವರು ಸಂದರ್ಶನ ಮಾಡಿದರು. ಬಕಿಂಗ್‌ಹ್ಯಾಂ ಅರಮನೆಯ ಉದ್ಯಾನವನದ ಔತಣಕ್ಕೂ ಆಹ್ವಾನ ಬಂದಿತು.

ನಾನು ನೋಡದ ಹಲವು ಸ್ಥಳಗಳಿಗೆ ಭೇಟಿ ನೀಡುವ ವ್ಯವಸ್ಥೆಯೂ ಆಯಿತು. ನಾನು ತುಂಬ ಕುತೂಹಲದಿಂದ ಕಾಣಲು ಇಚ್ಛಿಸಿದ ಸ್ಥಳವೆಂದರೆ: ಚಾರ್ಲಿವುಡ್ ಕಾಟನ್ ಕಾಲೇಜು. ನನ್ನ ಹದಿವಯಸ್ಸಿನ ಬಹುಪಾಲು ಅವಧಿಯನ್ನು ಅಲ್ಲೇ ಕಳೆದಿದ್ದೆ. ಕಟ್ಟಡದ ಹಿಂದಿನ ಲತಾಕುಂಜ ಮತ್ತು ಅಲ್ಲಿನ ಕಲ್ಲುಬೆಂಚು ಹಾಗೇ ಇದ್ದವು. ಮೂವತ್ತು ವರುಷಗಳವರೆಗೆ ಅದೇ ಕಲ್ಲುಬೆಂಚಿನ ಮೇಲೆ ಕುಳಿತು ಕಾಲ ಕಳೆದಿದ್ದೆ.

ಒಮ್ಮೊಮ್ಮೆ ಚಿಕ್ಕಪುಟ್ಟ ಲೌಕಿಕ ಸಂಗತಿಗಳು ನನ್ನ ಭಾವನೆಗಳನ್ನು ಕಲಕುವವು. ಒಮ್ಮೆ ಆ್ಯಡಮ್ ಹಳೆಯ ಫೊಟೋಗಳನ್ನೆಲ್ಲ ಕೆಳಗೆ ಬೀಳಿಸಿದ. ನಾನು ಅವನ್ನೆಲ್ಲ ಒಟ್ಟುಗೂಡಿಸಿ ದುರ್ಬೀನಿನ ಸಹಾಯದಿಂದ ನೋಡಿದೆ. ನಾನು ಕಳೆದುಕೊಂಡ ಕ್ಷಣಗಳೆಲ್ಲ ಅಲ್ಲಿದ್ದವು. ಆ್ಯಡಮ್, ಬೆಂಜಾಮಿನ್ ಚಿಕ್ಕ ಮಕ್ಕಳಿರುವಾಗಿನ ಫೊಟೋ ನೋಡುತ್ತಿರುವಂತೆ ಅವರನ್ನು ನಾನು ಆಗ ನೋಡಲಿಲ್ಲವಲ್ಲ ಎಂಬ ಭಾವ ನೋಯಿಸಿತು. ಕಣ್ಣು ತುಂಬಿ ಬಂದವು. ಅಷ್ಟರಲ್ಲೇ ಆ್ಯಡಮ್, ವಿಚಿತ್ರವಾಗಿ ತಲೆಗೂದಲು ಬಾಚಿನಿಂತ ನನ್ನದೇ ಒಂದು ಫೊಟೋ ತೋರಿಸಿದಾಗ ಅಳು ಮರೆತು ನಗೆಯುಕ್ಕಿತು.

ಅಂದು ರಾತ್ರಿ ಎಂದಿನಂತೆ ಕಿಟಕಿಯಾಚೆ ದಿಟ್ಟಿಸಿ ನೋಡುತ್ತ ನಿಂತೆ. ಬೆಳಕಿನ ಮಿಣುಕು ಆಕರ್ಷಕವಾಗಿತ್ತು. ದೇವರಿಗೆ ಕೃತಜ್ಞತೆ ಸಲ್ಲಿಸುವ ಪ್ರಾರ್ಥನೆ ಹೇಳಿಕೊಂಡೆ. ದೃಶ್ಯ–ಶಬ್ದಗಳೆರಡೂ ಬೆಸೆದುಕೊಂಡ ನನ್ನ ಬಾಳಿನ ಅನುಭವ ನಿಜಕ್ಕೂ ಅನಿರ್ವಚನೀಯ ಆನಂದ ತಂದಿದೆ. ●

ಧ್ವನಿ ಮುದ್ರಣ

ಎಚ್.ಎಸ್.ಶಿವಪ್ರಕಾಶ್: 2001

# ಪ್ರಭುತ್ವ, ಪ್ರಶಸ್ತಿ ಮುಂತಾಗಿ

**ಸಂ**ತ ಕಬೀರ, ವಚನಕಾರರು, ಹರಿದಾಸರು, ತತ್ವಪದಕಾರರು, ಸಂತ ತುಕಾರಾಮ ಇವರ್ಯಾರೂ ಪ್ರಭುತ್ವವನ್ನು ಅವಲಂಬಿಸಿರಲಿಲ್ಲ. ಯಾವತ್ತೂ ಆ ಕಾಲದ ಪ್ರಭುತ್ವದ ಎದುರು ನಿಂತು ಬೇಡಲಿಲ್ಲ. ಈಗಿನ ಎಲ್ಲರೂ ಸರಕಾರ, ಸಂಸ್ಥೆಗಳಿಂದ ಪುರಸ್ಕೃತರಾಗಿ ಬೀಗುತ್ತಾರೆ. ಇದನ್ನೆಲ್ಲ ನೋಡುವಾಗ ಆಸ್ಥಾನ ಕವಿಗಳ ಹಳೇ ಪರಂಪರೆಯ ಸಂತಾನವೇ ಎಂಬ ಅನುಮಾನ ಹುಟ್ಟುತ್ತದೆ.

ನಾನೂ ಸರ್ಕಾರಿ ಹುದ್ದೆಗಳನ್ನು ನೋಡಿದ್ದೇನೆ. ಸರಕಾರಿ, ಅನುದಾನಿತ ಸಂಸ್ಥೆಗಳು ಸಾಹಿತ್ಯ, ಕಲೆಯ ಸ್ವತಂತ್ರ ಬೆಳವಣಿಗೆಗೆ ಏನೂ ಸಹಾಯ ಮಾಡಲಾರವು ಎಂಬ ಅಭಿಪ್ರಾಯ ಇನ್ನಷ್ಟು ಸ್ಪಷ್ಟವಾಗಿದೆ. ಇದರಿಂದ ಸರಕಾರಿ ಅವಲಂಬಿತ ಸಾಹಿತಿ, ಕಲಾವಿದರ ಬಳಗ ಸೃಷ್ಟಿಯಾಗುತ್ತದಷ್ಟೆ.

ಕವಿಯಾಗಿ ನನ್ನನ್ನು ಎಷ್ಟು ಜನ ಓದುತ್ತಾರೆ. ಅದರಿಂದ ಹೇಗೆ ಪ್ರಭಾವಿತರಾಗುತ್ತಿದ್ದಾರೆ. ಪಾಸಿಟಿವ್ ಆದ ಬದಲಾವಣೆಗೆ ಓದುಗರನ್ನು ನನ್ನ ಕವನ ಪ್ರೇರೇಪಿಸುತ್ತಿದೆಯೇ? ಇಂಥದ್ದನ್ನು ಕೇಳಿಕೊಳ್ಳೋದು ನನಗೆ ಮುಖ್ಯವೆಂದು ಕಂಡಿದೆ. ಓದುಗರಿಗೆ ಏನು ಹೊಸ ಚಿಂತನೆ ನೀಡಬಹುದು ಎಂಬುದು ಮುಖ್ಯವೇ ಹೊರತು ಪಡೆಯುವ, ಪಡೆಯಬೇಕೆನಿಸುವ ಪ್ರಶಸ್ತಿಗಳಲ್ಲ.

ಸ್ವಾತಂತ್ರ್ಯೋತ್ತರದಲ್ಲಿ ನಮ್ಮ ಬಹುತೇಕ ಬರಹಗಾರರು, ಕವಿಗಳು, ಕಲಾವಿದರು ಪಾಶ್ಚಿಮಾತ್ಯ ಚಿಂತನಾ ಮಾದರಿಗಳನ್ನು ಅನಾಮತ್ತಾಗಿ ಅನುಕರಿಸಿದರು. ಹಾಗಾಗಿಯೇ ಸಹೃದಯ ವೃಂದದಿಂದ ದೂರವಾದರು. ಜನಮಾನಸದಲ್ಲಿ ಬೇರೂರಿರುವ ಪ್ರಭಾವಶಾಲಿ ಸಂಕೇತಗಳನ್ನು ಪುರೋಗಾಮಿ ಪ್ರಯೋಗಗಳಿಗೆ ಬಳಸುವಲ್ಲಿ ವಿಫಲರಾದರು. ಈಗ ಅದನ್ನೇ ಪ್ರಗತಿಗಾಮಿ ಚಿಂತನೆಗೆ ಬಳಸಲಾಗುತ್ತಿದೆ. ಪವಿತ್ರ ಸಂಕೇತಗಳನ್ನು ಮುಂದಿನ ಸಮಾಜದ ಅಗತ್ಯಕ್ಕೆ ತಕ್ಕಂತೆ ಹೇಳುವಲ್ಲಿ ನಾವು ಯಶಸ್ವಿಯಾಗಬೇಕು. ಹಳತು, ಹೊಸತು ಮೇಳೈಸುವ ಪ್ರಯತ್ನ ಇದು.

ಹಿಮಾಲಯ ಪ್ರದೇಶದ ತೆಹಲಿ ಪಟ್ಟಣಕ್ಕೆ ಇತ್ತೀಚೆಗೆ ಹೋಗಿದ್ದೆ. ಅಲ್ಲೀಗ ಡ್ಯಾಂ ಕಟ್ಟಲಾಗುತ್ತಿದೆ. ಇದರಿಂದ ತೆಹಲಿ ಪಟ್ಟಣ ಮುಳುಗುತ್ತಿದೆ. ಅದು ಬಹಳ ಏರುತಗ್ಗಿನ ಪ್ರದೇಶ. ಅಲ್ಲಿನ ಹೆಣ್ಣುಮಗಳೊಬ್ಬಳು 500-600 ಅಡಿ ಕೆಳಗಿಂದ ನಿತ್ಯ ಬಳಕೆಗೆ ಸೌದೆ ತರುವ ಸಾಹಸಮಯ ದೃಶ್ಯ ಕಂಡೆ. ಅಚ್ಚರಿಯೆನಿಸಿತು. ಅದರ ಹಿಂದೆಯೇ ಇಂತಹ ಸಾಹಸ, ಜೀವಂತಿಕೆ, ಸಂಸ್ಕೃತಿ ನಾಶವಾಗುತ್ತಲ್ಲಾ ಎಂಬ ದುಃಖವೂ ಆಯಿತು. ಈ ಜೀವನೋತ್ಸಾಹದಿಂದಲೇ ಈಗ ಪರಿಸರವಾದ ಆಂದೋಲನ ಅಲ್ಲಿ ಜಾಗೃತಗೊಳ್ಳುತ್ತಿದೆ.



**ಆಧುನಿಕ ಕನ್ನಡ ಕಾವ್ಯ ಸಂದರ್ಭದಲ್ಲಿ ಎಚ್.ಎಸ್.ಶಿವಪ್ರಕಾಶ್ ಪ್ರಮುಖ ಹೆಸರು. ಒಂದು ಘಟ್ಟದಲ್ಲಿ ಕಾವ್ಯ ಸವಕಲಾಗತೊಡಗಿತೆನ್ನುವಾಗ ಅದಕ್ಕೆ ಮರುಜೀವ ತುಂಬಿಸಿದಂತೆ ಬರೆದವರು ಅವರು. ಒಂದೆಡೆ ಕಾವ್ಯ, ಇನ್ನೊಂದೆಡೆ ನಾಟಕ ಬರವಣಿಗೆ ಮೂಲಕ ತಮ್ಮ ಚಿಂತನೆಯನ್ನು ಅದರ ಉನ್ನತ ಸಾಧ್ಯತೆಗಳಲ್ಲಿ ಪ್ರಕಟಿಸಿದವರು ಅವರು. ಸಂದರ್ಶನವೊಂದರಲ್ಲಿ ಅವರ ಕೆಲವು ಮಾತುಗಳು ಇಲ್ಲಿ.**

# ಅಲ್ಲಿ ಅವಳ ಮಧುಗೀತಗಳು

❑ ಕೃಷ್ಣ ರಾಯಚೂರು







ಬಣ್ಣಗಳಂತೆ ಕಾಡುತ್ತಾಳೆ
ರೇಖೆಗಳಂತೆ ಉಲಿಯುತ್ತಾಳೆ
ನೀ ಯಾರೆಂದರೆ
ನಸು ನಕ್ಕು
ಚಿತ್ರವಾಗುತ್ತಾಳೆ

★

ಗಾನದ ಹಿಂದೆ ನಾನಿದ್ದೆ
ನೀ ಬಣ್ಣವಾಗಿದ್ದೆ
ನಾ ಚಿತ್ರವಾದೆ

★

ನಮ್ಮಿಬ್ಬರ ಮಿಲನದ
ಮೌನದಲಿ
ತುಟಿಗಳದೇ ಸದ್ದು

★

ಹೇಳಬೇಕು
ಗೆಳತಿ
ಕೇಳದಿರುವಾಗಲೂ
ನೀ ವೈಯ್ಯಾರದಿಂದ ನಡೆವಾಗ
ಧೂಳ ಕಣವಾಗಿ ನಾ ಹಿಂಬಾಲಿಸುತ್ತೇನೆ
ನೀನು ಮೋಹದಿಂದ ನಗುವಾಗ
ತುಟಿಯಂಚಲಿ ಬೀಗುತ್ತೇನೆ

★

ನಶೆಯ ಮೊರೆ ಹೋದೆ
ಮಧುವಾದಳು
ಇರುಳಿಗೆ ಮರಳಿದೆ
ಜೋಗುಳ ಹಾಡಿದಳು

★

ಬಣ್ಣಗಳು ದಿಕ್ಕಾಪಾಲಾದಾಗ
ಕನಸಿಗೆ ಹಾರುತ್ತೇನೆ
ಅಲ್ಲಿ ಅವಳ ಮಧುಗೀತಗಳು
ಬಯಲ ಬೆಳಗುಗಳು
ಅಡಿ ಗಡಿ ದಾಟಿದ
ಕ್ಯಾನುವಾಸುಗಳು

★

ನರ್ತಿಸಿದವು
ಹಣೆಬೊಟ್ಟುಗಳು
ಬಾತುರೂಮಿನ ಬಾಗಿಲ
ಅಂಗಳ ಮಾಡಿ



---

ಕೃಷ್ಣ ರಾಯಚೂರು ಅವರ 'ವಿನ್ಯಾಸದ ಹೊರಗೆ' ಸಂಗ್ರಹದಿಂದ. ಚಿತ್ರಗಳೂ ಅವರದೇ ರಚನೆ.



# ಅಧಿಕ ಪ್ರಸಂಗ

❑ ಮೋಚ

## ಇರಾಕ್ ಮಾಡಿಬಿಡ್ತಾರೆ

**ದೃಶ್ಯ ಒಂದು**

ಶಿಷ್ಯ: ಗುರುವೇ, ಪೂರ್ವದ ರಾಷ್ಟ್ರಗಳು ಏನು ಬೆಳಿತಾವೆ?
ಗುರು: ಅಕ್ಕಿ, ರಾಗಿ, ಗೋದಿ, ಸಂಬಾರ ಜೀನಸು.
ಶಿಷ್ಯ: ಪಶ್ಚಿಮದ ರಾಷ್ಟ್ರಗಳು?
ಗುರು: ಬಂದೂಕು, ಮದ್ದುಗುಂಡು.
ಶಿಷ್ಯ: ಹಂಗಾರೆ ಪಶ್ಚಿಮದವರು ಉಣ್ಣೋದಿಕ್ಕೆ ಏನ್ ಮಾಡ್ತಾರೆ?
ಗುರು: ಯಾಪಾರ ಮಾಡ್ತಾರೆ.
ಶಿಷ್ಯ: ಏನ್ ಯಾಪಾರ?
ಗುರು: ಅದೇ ತುಪಾಕಿ, ಮದ್ದು ಗುಂಡು.
ಶಿಷ್ಯ:ಯಾರು ಕೊಳ್ತಾರೆ...?
ಗುರು: ಪೂರ್ವದೋರು.
ಶಿಷ್ಯ: ಬದಲಿಗೆ ಏನು ಮಾರ್ತಾರೆ?
ಗುರು: ಅದೇ ಅಕ್ಕಿ, ರಾಗಿ, ಗೋದಿ, ಸಂಬಾರ ಜೀನಸು.

**ದೃಶ್ಯ ಎರಡು**

ಗುರು: ಪಶ್ಚಿಮದ ರಾಷ್ಟ್ರಗಳ ಡಾಲರ್ ಬೆಲೆ ಯಾಕೆ ಏರುತ್ತಿದೆ?
ಶಿಷ್ಯ: ಪೂರ್ವದಲ್ಲಿ ಬಂದೂಕು ಮಾರಾಟ ಅಧಿಕವಾಗಿದೆ.
ಗುರು: ಹಂಗಾದ್ರೆ ಡಾಲರ್ ಬೆಲೆ ಇನ್ನೂ ಹೆಚ್ಚಾಗುತ್ತದಲ್ಲ?
ಶಿಷ್ಯ: ಡಾಲರ್ ಹೆಚ್ಚಾದರೆ ಪೂರ್ವಕ್ಕೆ ಸಾಲ ಹೆಚ್ಚು ಸಿಗುತ್ತೆ.
ಗುರು:ಸಾಲ ಮರು ಪಾವತಿ ಹ್ಯಾಗೆ?
ಶಿಷ್ಯ: ಹಂಗೇನೂ ಇಲ್ಲ, ಋಣಂ ಕೃತ್ವಾತ್ ಘೃತಂ ಪಿಬೇತ್
(ಸಾಲ ಮಾಡಿ ತುಪ್ಪ ತಿನ್ನು)
ಗುರು: ಅವರೇನು ಸುಮ್ನೆ ಬಿಡ್ತಾರ?
ಶಿಷ್ಯ: ಬಿಡಲ್ಲ, ಸಾಲ ಕೊಟ್ಟು ಕೊಟ್ಟು ದೇಶಕ್ಕೆ ದೇಶಾನೆ ಕೊಂಡುಕೊಳ್ತಾರೆ.
ಗುರು: ಸಾಲನೇ ಬೇಡಾಂದ್ರೆ...
ಶಿಷ್ಯ: ಇರಾಕ್ ಮಾಡಿ ಬಿಡ್ತಾರೆ.

## ಭೂಗೋಳ ಶಾಸ್ತ್ರ ಬರೋಲ್ವೆ

ಮಗಳು ಕೇಳಿದ್ಲು, ಅಪ್ಪಾ ಈ ದೇಶದ ಎಲ್ಲ ನದೀನಾ ಒಂದಕ್ಕೊಂದು ಜೋಡಿಸೋಕೆ ಇಷ್ಟೆಲ್ಲಾ ಸದ್ದು ಗದ್ದಲ, ಗುದ್ದಾಟ ಯಾಕೆ ಮಾಡ್ತಾರೆ? ಭಾರತದ ನದಿಗಳ ನಕ್ಷೆ ತಂದು ನೀಲಿ ಪೆನ್ಸಿಲ್‌ನಿಂದ ಜೋಡಿಸುತ್ತಾ ಬಂದ್ರೆ ಆಯಿತು.

ಅದು ಸರಿ, ಆದ್ರೆ ರಾಜಕಾರಣಿಗಳಿಗೆ ಭೂಗೋಳ ಶಾಸ್ತ್ರ ಬರೋದಿಲ್ಲವಲ್ಲ.

## ಮಡಿಚಿಕೊಂಡ್ರೆ ಚಡ್ಡಿ, ಬಿಡಿಸಿದ್ರೆ ಪ್ಯಾಂಟ್

ಫಾರಿನಿನ ಶಾಖೆಗಳಲ್ಲಿ ಸಂಘ ಪರಿವಾರದವರು ಪ್ಯಾಂಟ್ ಹಾಕಿ ಕವಾಯತು ಮಾಡುತ್ತಾರೆ, ನಮಗೂ ಅದನ್ನೇ ಕೊಡಿಸಿ ಎಂದು ಇಲ್ಲಿಯ ಸೇವಕರು ದುಂಬಾಲು ಬಿದ್ದ ಮೇಲೆ ಅರವತ್ತನಾಲ್ಕು ಸಾವಿರ ಶಾಖೆಗಳಲ್ಲಿನ ಅರವತ್ತು ಲಕ್ಷ ಸೇವಕರು ಕನಿಷ್ಠ ಒಂದು ಪ್ಯಾಂಟ್ ಹೊಲಿಸಿದರುನೂವೆ ಕೋಟಿಗಟ್ಟಲೆ ವ್ಯವಹಾರ ಆದೀತು.

ನಾಗಪುರದ ದರ್ಜಿಗಳು ಹಾಗೂ ಅಹಮದಾಬಾದಿನ ಬಟ್ಟೆ ಮಿಲ್‌ಗಳು ಬಿಡುವಿಲ್ಲದ ಕೆಲಸ ಬರಬಹುದು ಎಂದು ಕಾದು ಕೂತಿದ್ದಾರೆ. ಇವರ ಆಸೆಗೆ ತಣ್ಣೀರು ಎರಚಿದಂತೆ ಈಗ ಇರುವ ಚಡ್ಡಿಯ ಹೊಲಿಗೆ ಬಿಡಿಸಿಬಿಟ್ರೆ ಅದೇ ಪ್ಯಾಂಟ್ ಆಗುತ್ತದೆ ಎಂದು ಅಪ್ಪಣೆ ಕೊಡಿಸುವ ಸಾಧ್ಯತೆಗಳು ಅಧಿಕೃತ ಮೂಲದಿಂದ ಸದ್ಯ ಹೊರಬೀಳಲಿದೆ.

## ಮೂರು ಪುಸ್ತಕ

ಅನಕ್ಷರಸ್ಥ ಕೊಡಲಿ ರಾಮ III ಬಾವಿ ಕಟ್ಟೆ ಮೇಲೆ ಲೋಕಶಿಕ್ಷಣ ಇಲಾಖೆ ಹೊರತಂದ ತ್ವರಿತವಾಗಿ ಅಕ್ಷರ ಕಲಿಯುವ ಕನ್ನಡ ಅಕ್ಷರ ಪುಸ್ತಕ ಓದೋದಿಕ್ಕೆ ಪ್ರಯಾಸ ಪಡುತ್ತಿದ್ದ. ಅಚಾನಕ್ ಪುಸ್ತಕ ಬಾವಿಗೆ ಬಿತ್ತು. ರಾಮ ಲಭೋ ಲಭೋ ಬಾಯಿಬಡ್ಕೊಂಡ. ಈ ಸದ್ದಿಗೆ, ಶಿಕ್ಷಣ ಇಲಾಖೆಯ ಅವಾಂತರಗಳಿಂದ ಭಯಬಿದ್ದು ಬಾವಿಯೊಳಗೆ ಅವಿತಿದ್ದ ಸರಸ್ವತಿಮಾತೆ ಎದ್ದು ಬಂದು ರಾಮನ ದುಃಖದ ಕಾರಣ ತಿಳಿದು ಬಾವಿಯಿಂದ ಒಂದು ಹಿಂದಿ ಪುಸ್ತಕ ತಂದು ಇದೇನಾ ನಿನ್ನ ಪುಸ್ತಕ ಅಂದ್ಲು, ರಾಮ ಹೌದು ಎಂದು ಗಬಕ್ಕನೆ ಎದೆಗವಚಿಕೊಂಡ.

ಬೇಡ. ಸರಸ್ವತಿ ಅಂದ್ಲು, 'ಅಲ್ವೋ ರಾಮ III ನಿನ್ನ ಮುತ್ತಾತನ ಕಬ್ಬಿಣದ ಕೊಡಲಿ ಬಾವಿಗೆ ಬಿದ್ದಾಗ ನಾನೇ ಚಿನ್ನದ ಕೊಡಲಿ ತಂದು ಕೊಟ್ಟೆ, ಆಯಪ್ಪ ಸತ್ಯವಂತ. ತನ್ನದಲ್ಲ ಅಂದಿದ್ದ. ನೀನ್ಯಾಕೆ ಈಗ ನಿಂದಲ್ಲದ ಪುಸ್ತಕವನ್ನು ನಿಂದು ಅಂತ ಸುಳ್ಳು ಹೇಳಿದೆ?' ರಾಮ ಅಂದ: ಮಾತಾಯಿ ಈ ಕನ್ನಡ ಅಕ್ಷರ ಕಲಿಯೋದೆ ಕಷ್ಟ. ಅದರ ಜೊತೆಗೆ ನೀನು ಮುಳುಗಿ ಮುಳುಗಿ ನಿಂದಾ ಅಂತ ಹಿಂದಿ, ಇಂಗ್ಲಿಷ್ ಪುಸ್ತಕ ತಂದು ತೋರ್‍ಸಿ, ಕೊನೇಲಿ ಮೂರು ಪುಸ್ತಕ ನಿಂಗಿರಲಿ ಅಂತ ಕೊಟ್ಟು ಹೋಗ್ತಿ. ಈ ಕನ್ನಡದ ಅಕ್ಷರ ಕಲಿಯೋದೆ ಕಷ್ಟ ಅದರ ಜೊತೆಗೆ ಇನ್ನೆರಡನ್ನು ಏನ್ ಮಾಡ್ಲಿ...

## ಸೂತ್ರ ಕಳಕೊಂಡವ್ರೆ

ಸಿದ್ದು ಮಂಕಾಗಿದ್ದನ್ನು ಗಮನಿಸಿದ ವಂದಿಮಾಗದರು ಹ್ಯಾಪ್ ಮೋರೆ ಹಾಕಿಕೊಂಡು ನಿಧಾನಸಭೆಯ ಪಡಸಾಲೆಯಲ್ಲಿ ಅಡ್ಡಾದಿಡ್ಡಿ ಅಡ್ಡಾಡುವಾಗ ಸಿಂಗು ಲವಲವಿಕೆಯಿಂದ ಓಡಾಡಿಕೊಂಡು ಇದ್ದರು.

'ಏನ್ ಸಿಂಗ್ ಸಾಹೇಬ್ರೆ, ಅರಾಮೇನ್ರಿ?'

'ಚಲೋ ಇದ್ದೀನಿ.'

'ಮತ್ತೇನು ತೊಂದ್ರೆ ಗಿಂದ್ರೆ...'

'ಹ್ಹಿ ಹ್ಹಿ ಅಂತಾದೇನು ಇಲ್ಲಪ್ಪ ಅದೇ, ಬಗ್ಗಿ ಚಪ್ಲಿ ಸಿಕ್ಸೋದು ಸ್ವಲ್ಪ ತ್ರಾಸ.'

'ಯಾಕೆ, ಚಪ್ಲಿ ಕೈಗೆ ತೆಗೋ ಬೇಕೂಂತ ಇದ್ದೀರೇನು?'

'ಹಂಗೇನು ಇಲ್ಲಪ್ಪಾ... ನಮ್ಮ ಸಿದ್ದು ಯಾಕೋ ಮಂಕಾಗವ್ನೆ.'

'ಓಹೋ ಅದಾ, ಅವರು ಸೂತ್ರ ಕಳಕೊಂಡು ಬಿಟ್ಟಿರ್‌ಬೇಕು.'

'ಅಂದ್ರೆ...?'

'ಸಿಂಗು ಸಾಹೇಬ್ರೆ ಇಲ್ಲಿ ಕೇಳಿ. ಮೊನ್ನೆ ನಮ್ಮ ಗೌಡದೇವ್ರು ಬಿಸಿಬಿಸಿ ಮುದ್ದೆ ಕಲಸ್ಕೊಳ್ಳುವಾಗ ಬೆರಳು ಸುಟ್ಟುಕೊಂಡುಬಿಟ್ಟವ್ರೆ. ಎಯಿಟಿ ಪರ್ಸೆಂಟ್ ಬರ್ನ್. ಅದ್ರಿಂದ ಬೆರಳುಗಳು ಸೂತ್ರ ಹಿಡಿದುಕೊಳ್ಳುವ ಕೆಪಾಸಿಟಿ ಕಳ್ಕೊಂಡು ಬಿಟ್ಟಿದ್ದಾವೆ.'

'ಓಹೋ ಹಿಂಗಾ ಕತೆ... ನಮ್ಮ ಮೇಡಂಗೆ ತಾವೇ ಸ್ವತಾ ಮುದ್ದೆ ಕಲಸ್ಕೊಳ್ಳಕ್ಕೆ ಹೋಗಬಾರದು ಅಂತಾ ತಕ್ಷಣ ಹೇಳಬೇಕಪ್ಪಾತಮ್ಮಾ...ಬರ್ತೀನಿ...'

●

## ಕೊಯ್ಲು



'ಹಂಗಾಮ' ಹೊಸ ಬಗೆಯ ಪತ್ರಿಕೆಯಾಗಿದೆ. ಇದರ ಸರ್ವಸ್ವವೂ ಹೊಸತನದಿಂದ ಕೂಡಿ ಸತ್ವಪೂರ್ಣವಾಗಿದೆ. ನೂತನ ಲೇಖಕರ ಒಂದು ತಂಡವನ್ನೇ ಬೆಳಕಿಗೆ ತರುತ್ತಿದ್ದೀರಿ. ವಿಷಯಗಳು ವಿಪುಲವಾಗಿವೆ. ಬರವಣಿಗೆಯಲ್ಲಿ ಹೊಸತನವಿದೆ. ನಾನು ಆಸಕ್ತಿಯಿಂದ ಓದಿ ಈ ಮಾತನ್ನು ಹೇಳುತ್ತಿದ್ದೇನೆ.

**ಜಿ.ವೆಂಕಟಸುಬ್ಬಯ್ಯ, ಬೆಂಗಳೂರು**

ಪತ್ರಿಕೆ ಬಹಳ ಚೆನ್ನಾಗಿ ಬರುತ್ತಿದೆ. ನಾವು ಓದುವ ಸಾಹಿತ್ಯ ಹೀಗಿದ್ದರೆ ಚೆನ್ನ. ಖುಷಿ ಕೊಡುವುದರ ಜೊತೆಗೆ ಕಣ್ಣು ತೆರೆಸುವ ಕೆಲಸವೂ ಸಾಗುತ್ತದೆ. ನಿಮ್ಮ ಬರಹಗಾರ ಬಳಗದವರಿಗೆ ಅಭಿನಂದನೆಗಳು.

**ವಿ.ಜೆ.ನಾಯಕ, ಅಂಕೋಲಾ**

'ಹಂಗಾಮ'ದ ಮೂರೂ ಸಂಚಿಕೆಗಳು ಈಗಷ್ಟೇ ನನ್ನ ಕೈಸೇರಿವೆ. ಈ ಮೂರೂ ಸಂಚಿಕೆಗಳು ತನ್ನನ್ನು ಮೊದಲು ಓದು, ತನ್ನನ್ನು ಮೊದಲು ಓದು ಎಂದು ಸೆಳೆಯುತ್ತಿವೆ.

**ಕೆ.ವಿ.ಸೌಮ್ಯ, ಮೈಸೂರು**

ಪತ್ರಿಕೆ ನಿಜವಾಗಿಯೂ ತುಂಬ ಚೆಂದವಾಗಿ ಬರುತ್ತಿದೆ. ನಿಮ್ಮ ಅಂಕಣ, ಜಯಂತ್, ಪ್ರಸನ್ನರ ಬರಹಗಳು... ಒಂದಕ್ಕಿಂತ ಒಂದು ಚೆಂದ. ಇಡೀ ಪತ್ರಿಕೆಯಲ್ಲಿ ಒಂದೂ ಸಾಲು ಅನಪೇಕ್ಷಿತ ಅಲ್ಲ ಎಂದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ. ಆನಂದ್ ಋಗ್ವೇದಿಯವರ 'ಅಪ್ಪನ ಐದು ಮುಖಗಳು' ಕಥೆ ತುಂಬ ಇಷ್ಟವಾಯಿತು.

**ದೀಪಾ ಹಿರೇಗುತ್ತಿ, ಮೂಡಿಗೆರೆ**

ಎಲ್ಲ ಪತ್ರಿಕೆಗಳನ್ನು ಓದಿದ ನಂತರವೂ ಹದಿನೈದು ದಿನಗಳಿಗೊಮ್ಮೆ ಬರುವ 'ಹಂಗಾಮ'ದ ಭಾವತೀರ ಸೇರಲು ಕಾತರಿಸುತ್ತಿರುತ್ತೇನೆ. 'ಹಂಗಾಮ'ದ ಪ್ರತಿ ಪುಟವೂ ಆಕರ್ಷಕ. ಮುಖಪುಟ ವಿನ್ಯಾಸ ಅದ್ಭುತ. ಪ್ರತಿಯೊಂದು ಕಾಲಂನ ಬರಹಗಳನ್ನು ಓದುತ್ತಿದ್ದರೆ ನಿಜಕ್ಕೂ ಭಾವತೀರಕ್ಕೆ ಬಂದುಬಿಟ್ಟಿರುತ್ತೇನೆ.

**ಆರ್.ಕೇಶವಮೂರ್ತಿ, ಶಿವಮೊಗ್ಗ**

'ಹಂಗಾಮ'ದ ಪ್ರತಿ ಸಂಚಿಕೆಯೂ ಸೊಗಸಾಗಿರುತ್ತದೆ. ಶುಕ್ಲಪಕ್ಷದ ಚಂದ್ರನಂತೆ 'ಹಂಗಾಮ' ಬೆಳೆಯುತ್ತಾ ಬೆಳಗುತ್ತಾ ಹೊಳೆಯುತ್ತಾ ಸಾಗಿದೆ. ನಮ್ಮೆದೆಯ ಕದವನ್ನು ತಟ್ಟುವ ಆತ್ಮೀಯ ಗೆಳೆಯನೊಬ್ಬ ಹದಿನೈದು ದಿನಗಳಿಗೊಮ್ಮೆ ಮನೆ-ಮನದ ಬಾಗಿಲಿಗೆ ಬರುತ್ತಿದ್ದಾನೆ. ಈ 'ಬೆರಗು' ಶಾಶ್ವತವಾಗಿರಲಿ.

**ಅನಂತ ಹುದೆಂಗಜೆ, ಉಜಿರೆ**

ನಿಮ್ಮ ಪತ್ರಿಕೆ ಗಾತ್ರದಲ್ಲಿ ಚಿಕ್ಕದು. ವಿಷಯ-ವಿಚಾರದ ದೃಷ್ಟಿಯಿಂದ ಬಹಳ ಹಿರಿದು. ಲೇಖನಗಳೆಲ್ಲವೂ ಸ್ವಾರಸ್ಯಪೂರ್ಣ, ವೈಚಾರಿಕ. ನನಗೆ ಅಚ್ಚುಮೆಚ್ಚಾದ ಪತ್ರಿಕೆ.

**ಕೆ.ಜಿ.ಭದ್ರಣ್ಣವರ, ಮುದ್ದೇಬಿಹಾಳ**

'ಹಂಗಾಮ' ಚೆಂದದ ಪ್ರಯತ್ನ. ಹೊಸತನದೆಡೆಗಿನ ತುಡಿತ ಮಾತ್ರವೇ ಬದುಕನ್ನು ಜೀವಂತವಾಗಿಡಬಲ್ಲದು. ಈ ದಿಸೆಯ ನಿಮ್ಮ ಪ್ರಯತ್ನ ನಿಜಕ್ಕೂ ಅಭಿನಂದನೀಯ. ದುಡ್ಡು ಕೊಟ್ಟು ಓದುವ ಮಂದಿಯ ಅಭಾವವಿರುವ ಈ ದಿನಗಳಲ್ಲಿ 'ಹಂಗಾಮ' ಬರುತ್ತಿರುವುದು ಕೊಂಚ ಆತಂಕದ ಸಂಗತಿಯೂ ಹೌದು.

**ಟಿ.ಗುರುರಾಜ್, ಮೈಸೂರು**

'ಹಂಗಾಮ'ದ ಪರಿಚಯವಾಯಿತು. ತಾಜಾತನದ ಹೊಸ ಅನುಭವಕ್ಕಾಗಿ ನಿಮಗೆ ಧನ್ಯವಾದಗಳು. ಭರವಸೆ ಹುಟ್ಟಿಸುವ, ಪುಟಪುಟದಲ್ಲೂ ಆತ್ಮೀಯ ಭಾವವಿರುವ, ಚಿಕ್ಕಚೊಕ್ಕ ಅಂಕಣಗಳ ಈ ಭಾವತೀರದ ಬೆರಗು ನಿರಂತರವಾಗಿರಲಿ.

**ನರಸಿಂಹ ಭಟ್ಟ, ರಾಯಚೂರು**

ಅದೆಷ್ಟೊಂದು ಚೆಲುವಾದ ಮಾರ್ಕ್ವೇಜ್‌ನನ್ನು ಕಾಣಿಸಿದ್ದೀರಲ್ಲ, 'ಅತಿಥಿ' ಅಂಕಣದಲ್ಲಿ. ತುಂಬಾ ತುಂಬಾ ಇಷ್ಟವಾಗಿಬಿಟ್ಟಿತು ಆ ಬರಹ. ಇಲ್ಲಿ ಹಾಸ್ಟೇಲಿನಲ್ಲಿ ನಾವೊಂದಿಷ್ಟು ಹುಡುಗಿಯರು ಹದಿನೈದು ದಿನಗಳಿಗೊಮ್ಮೆ ಮತ್ತೇನಕ್ಕೂ ಅಲ್ಲ, ಆತ್ಮಸಖನಂಥ 'ಹಂಗಾಮ'ಕ್ಕಾಗಿ ಕಾಯುತ್ತೇವೆ.

**ಅರುಂಧತಿ, ಧಾರವಾಡ**

ನನ್ನ ಭಾವಿ ಪತ್ನಿಗೆ 'ಹಂಗಾಮ' ಓದಲು ಕೊಟ್ಟಿದ್ದೆ. ಮೊನ್ನೆ ಮತ್ತೆ ಊರಿಗೆ ಅವಳನ್ನು ಭೇಟಿಯಾಗಲು ಹೋದಾಗ ಹೊಸ 'ಹಂಗಾಮ' ಸಂಚಿಕೆಗಾಗಿ ಕೇಳಿದಳು. ಸಾಹಿತ್ಯವನ್ನು ಅಷ್ಟಾಗಿ ಓದದ ಅವಳಿಗೆ ಹಂಗಾಮ ಮಾತ್ರ ತುಂಬ ಇಷ್ಟವಾಗಿದೆ. ನನಗೂ. ನಾವಿಬ್ಬರೂ ಜೀವನದ ಜೊತೆಗೆ 'ಹಂಗಾಮ'ವನ್ನೂ ಹಂಚಿಕೊಂಡು ಓದುತ್ತೇವೆ.

**ವರದರಾಜ್, ದಾಂಡೇಲಿ**

Edited, published, printed and owned by **Venkataramana Gowda**, No.1, 2nd floor, Ist cross, R.K.Street, Seshadripuram, BANGALORE - 560020. Ph: 23561058

Printed at **Shubhodaya Printers**, No.117/78, Surveyor Street, Basavanagudi, B'lore-04. Ph.: 26679508

